# ಇತಿಹಾಸದ ಯಥಾರ್ಥತೆ





೧೯೭೦

ಪ್ರಕಾಶಕರು:

ಸೀತಾರಾಮಾಚಾರ್ಯ ನಾರಾಯಣಾಚಾರ್ಯ ಉಡುಪ,

ಉಡುಪಿ, ದ. ಕ.

# ಮುನ್ನುಡಿ

## ಕೃತಿಯ ಕುರಿತು ಎರಡು ಮಾತು

ಇದೊಂದು ವಿಮರ್ಶಾತ್ಮಕವಾದ ಪುಸ್ತಕವಾಗಿದೆ. ಡಾಕ್ಟರ್ ಸಾಲೆತ್ತೂರು ಇವರ "ಸ್ಥಾನಿಕರು ಮತ್ತು ಅವರ ಪ್ರಾಧಾನ್ಯತೆ", ಮತ್ತು ಐ. ಕೆ. ಶ್ರೀನಿವಾಸರಾಯರ "ಸ್ಥಾನಿಕ ಬ್ರಾಹ್ಮಣರು "ಶ್ರೀ ಗುರುರಾಜ ಭಟ್ಟರ "ತುಳುನಾಡು" ಶ್ರೀ ಅಚ್ಯುತ ಶರ್ಮರ "ಉಡುಪಿಯ ನೈಜ ಹಿನ್ನೆಲೆ" ಈ ಗ್ರಂಥಗಳಲ್ಲಿ ಕೆಲವೊಂದು ಜಾತಿಗಳನ್ನು ಎತ್ತಿ ಹಿಡಿದು ಪ್ರತಿಪಾದಿಸುವರೇ ಇತಿಹಾಸಗಳನ್ನು ವಿಚಿತ್ರವಾಗಿ ವಿವರಿಸಿ ವಿಮರ್ಶಿಸಿ ವಿಪರ್ಯಾಸಗೊಳಿಸಿರುವುದನ್ನು ಶ್ರೀಮಾನ್ ಸೀತಾರಾಮ ಉಡುಪರು ಈ ಪುಸ್ತಕದಲ್ಲಿ ಆಧಾರಪೂರ್ವಕ ಮತ್ತು ಯುಕ್ತಿಯುಕ್ತವಾಗಿಯೂ, ಕೆಲವೆಡೆ ಮೇಲಿನ ಗ್ರಂಥಕಾರರ ವಾಕ್ಯಗಳ ಆಧಾರದಿಂದಲೇ ವಿಮರ್ಶಿಸಿ ಸತ್ಯವನ್ನು ಹೊರಚೆಲ್ಲಿ ಇತಿಹಾಸದ ಮೇಲೊಂದು ಹೊಸ ಬೆಳಕನ್ನು ಬೀರಿದ್ದಾರೆ. ಇವರ ಪ್ರಯತ್ನ ಅತ್ಯಂತ ಉಪಯುಕ್ತವೂ ಆಗಿದೆ. ನಾಣ್ಯದ ಒಂದು ಮುಖವನ್ನು ಮಾತ್ರ ಕಂಡವರಿಗೆ ಇನ್ನೊಂದು ಮುಖವನ್ನು ತೋರಿ ಸತ್ಯದೆಡೆಗೆ ಸಾಗಲು ದಾರಿ ತೋರಿದ್ದಾರೆ.

ಈ ಪುಸ್ತಕದಲ್ಲಿ ಇಂಗ್ಲೀಷರು ಅಥವಾ ಅವರಿಂದ ಮಾರ್ಗದರ್ಶಿಸಲ್ಪಟ್ಟ ಭಾರತೀಯರು ವಿಮರ್ಶೆ ಸಂಶೋಧನೆಗಳೆಂದು ಬರೆಯುವುದರ ಮೂಲಹೇತುವನ್ನು ಸಕಾರಣವಾಗಿ ಹೊರಗೆಡಹಿ ಅಂತಹ ಗ್ರಂಥಗಳ ಉದ್ದಿಶ್ಯವನ್ನು ಜನರ ಮುಂದಿಟ್ಟಿರುವುದು ಸಮಯೋಚಿತವಾಗಿದೆ. ಭಾರತೀಯ ಇತಿಹಾಸದ ಕಾಲಗಣನೆಯಲ್ಲಿ ಯೋಗ್ಯವಾದವುಗಳನ್ನು ಬಳಸದೆ ಅನಿರ್ಧಾರಿತ ಮತ್ತು ಅಯುಕ್ತವಾದ ಯುಕ್ತಿಗಳಿಂದ ಚಂದ್ರಗುಪ್ತ ಅಶೋಕ ಮೊದಲಾದವರ ಕಾಲವನ್ನು ವಿಪರ್ಯಸ್ತಗೊಳಿಸಿ ಬರೆದು ಅದರಿಂದ ಇತಿಹಾಸಕ್ಕೆ ಉಂಟಾದ ಅಪಚಾರವನ್ನು ಉಲ್ಲೇಖಿಸಿದುದು ಸಮಂಜಸವಾಗಿದೆ. ಹಾಗೂ ವಿಮರ್ಶಕರಿಗೊಂದು ಸವಾಲೂ ಆಗಿದೆ! ಎಂದು ಭಾವಿಸಬಹುದು.

ಶ್ರೀ ಐ. ಕೆ. ಶ್ರೀನಿವಾಸರಾಯರು, ದೇವಕಾರಿಸ್ಥಾನಿಕರು ತಾವು ಮೊದಲು ಸ್ಥಾನಿಕರು ಮಾತ್ರವೆಂದೂ, ನಂತರ ಈ ಒಂದು ಶತಕದೊಳಗೆ ಸ್ಥಾನಿಕ ಬ್ರಾಹ್ಮಣರೆಂದೂ, ಶಿವಬ್ರಾಹ್ಮಣರೆಂದೂ ಆದ ಕುರಿತು ಉಲ್ಲೇಖಿಸಿರುತ್ತಾರೆ. ಸ್ಥಾನಿಕರು ಸುಬ್ರಹ್ಮಣ್ಯ ಮಠದ ಶಿಷ್ಯರಾಗಿಯೇ ಇದ್ದರೆಂದೂ ನಂತರ ಸುಬ್ರಹ್ಮಣ್ಯ ಮಠದವರೊಡನೆ ಮನಸ್ತಾಪಪಟ್ಟು (ಜಗಳಾಡಿ) ಶ್ರೀಶೃಂಗೇರಿ ಮಠದ ಶಿಷ್ಯರಾದ ಕುರಿತು ಇತಿಹಾಸದ ಮೇಲೊಂದು ಕ್ಷ-ಕಿರಣ ಚೆಲ್ಲಿದ್ದಾರೆ. ಡಾ| ಸಾಲೆತ್ತೂರರ ಗ್ರಂಥದಿಂದ "ಶಾಸನದ ಸ್ಥಾನಿಕರೆಂದರೆ ತಾವೇ" ಎಂದು ಹೇಳಿಕೊಳ್ಳುತ್ತಿದ್ದ ದೇವಕಾರಿ ಸ್ಥಾನಿಕ

ವನ್ನು "ಶಾಸನದ ಸ್ಥಾನಿಕರಲ್ಲ" ಶಾಸನದ ಸ್ಥಾನಿಕರೆಂದರೆ ಕಾಳಾಮುಖ ಶೈವರೆಂದು ಸ್ಪಷ್ಟಪಡಿಸಿ ಶಾಸನಗಳಿಂದ ಹೊರಗಿರಿಸಿದ್ದು ಮಾತ್ರವಲ್ಲದೆ ದೇವಕಾರ್ಯಗಳು "ಶಾಸನದ ಶಿವಬ್ರಾಹ್ಮಣರಲ್ಲ" ಒಂದಕ್ಕೊಂದು ಭ್ರಮಿಸಕೂಡದು. ಈ ಮಹತ್ವದ ವಿಚಾರವನ್ನು ಶ್ರೀ ಶ್ರೀನಿವಾಸರಾಯರ ವಾದದ ಆಧಾರದಿಂದಲೇ ನಿರೂಪಿಸಿರುವುದು ಅತ್ಯಂತ ಕುತೂಹಲಕಾರಿಯಾಗಿದೆ.

ಶ್ರೀಸುಬ್ರಹ್ಮಣ್ಯದ ಕುರಿತು 1373ರಲ್ಲಿ ಸುಬ್ರಾಯ ಬಲ್ಲಾಳನು ಬರೆಸಿಕೊಟ್ಟ ತಾಮ್ರಶಾಸನದ ಪ್ರಾಮಾಣಿಕತನವನ್ನೂ ಅದಕ್ಕೆ ಪೋಷಕವಾದ ರಿಕಾರ್ಡುಗಳನ್ನು ಸಂಗ್ರಹಿಸಿ ವಿಮರ್ಶಿಸಿ ಸರಕಾರದವರು ಶ್ರೀದೇವಸ್ಥಾನದ ಅಧಿಕಾರವನ್ನು ಸ್ವಾಧೀನ ಪಡಿಸಿಕೊಳ್ಳುವ ವರೆಗೆ ಸುಬ್ರಹ್ಮಣ್ಯ ಮಠದವರೇ ಆಡಳಿತ ನಡೆಸಿಕೊಂಡು ಬಂದಿದ್ದರು ಎಂದು ಸಿದ್ಧಪಡಿಸಿರುವುದು ಗ್ರಾಹ್ಯವಾಗಿದೆ.

ಕರ್ಹಾಡ ಚಿತ್ಪಾವನರ ಕುರಿತಾದ ಅಪೂರ್ವ ಸಂಗತಿಗಳನ್ನು ಆಧಾರಪೂರ್ವಕ ವಿಶದಪಡಿಸಿರುವುದು ಅತ್ಯಂತ ಯೋಗ್ಯವಾಗಿದೆ. ಇದರಿಂದ ಶ್ರೀಗುರುರಾಜ ಭಟ್ಟರು ಸಹ್ಯಾದ್ರಿಗೆ ಮಾಡಿರುವ ಅಪಚಾರಕ್ಕೆ ಪರಿಮಾರ್ಜನೆಯಾದಂತಾಗಿದೆ.

ಗೌಡಸಾರಸ್ವತರು, ಕೊಂಕಣರು ಎಲ್ಲಾ ಒಂದೇ ಎಂಬ ತಿಳುವಳಿಕೆಯಿಂದ ಆದ ತಪ್ಪುಗಳನ್ನು ಅದರ ವಿವೇಚನೆಯ ಆವಶ್ಯಕತೆಯನ್ನು ವಿವರಿಸಿ ಸೂಕ್ತ ಮಾರ್ಗದರ್ಶನ ಮಾಡಲಾಗಿದೆ.

ಸಹ್ಯಾದ್ರಿ ಉತ್ತರ ಖಂಡದ 7–8ನೇ ಅಧ್ಯಾಯಗಳ ಅರ್ಥವನ್ನು ಶ್ರೀ ಗುರು ರಾಜಭಟ್ಟರ ತುಳುನಾಡು ಗ್ರಂಥದ ವಾಕ್ಯಗಳಿಂದಲೇ ಸಿದ್ಧಪಡಿಸಿ ಗೋಕರ್ಣದಿಂದ ಪಯಸ್ವಿನೀ ವರೆಗಿನ ತುಳುವದಲ್ಲಿ ಏಕಕಾಲದಲ್ಲಿ ಮಯೂರವರ್ಮನು—ಹವೀಕ, ಕೋಟ, ಶಿವಳ್ಳಿಯವರನ್ನು 32 ಗ್ರಾಮಗಳಲ್ಲಿ ನೆಲೆಸಿದ, ಅಗ್ರಹಾರಗಳನ್ನು ಕಟ್ಟಿಸಿದ ವಿಷಯಗಳು ಸುಂದರವಾಗಿ ನಿರೂಪಿಸಲ್ಪಟ್ಟಿವೆ.

ಸ್ಥಾನಿಕರನ್ನು ಮೇಲೆ ಹಿಡಿದು ಶಿವಳ್ಳಿಯವರನ್ನು ಕೀಳೆಂದು ತೋರಿಸುವ ಚತು ತ್ಕಾರವನ್ನು ಬಯಲಿಗೆಳೆದು ಅವರ ವಾದವನ್ನು ನಿರಾಕರಿಸುವಲ್ಲಿ ಶ್ರೀ ಉಡುಪರ ಪ್ರಯತ್ನ ಯೋಗ್ಯವೂ, ಅಭಿನಂದನೀಯವೂ ಆಗಿದೆ.

ಉಡುಪಿಯಲ್ಲಿ ಶ್ರೀಕೃಷ್ಣ ಪ್ರತಿಷ್ಠೆ ಶ್ರೀಹಸ್ತಾಮಲಕರ ವೇಣುಗೋಪಾಲ, ಈ ಕುರಿತು ಉಡುಪರು ಶರ್ಮರ ವಾದಕ್ಕೆ ಇತ್ತ ಉತ್ತರ ಸಂದರ್ಭೋಚಿತವಾಗಿದೆ.

ಮುದ್ರಾಧಾರಣೆಯ ಸಂಪ್ರದಾಯ ಬಹು ಪ್ರಾಚೀನ, ಉಪಾಕರ್ಮ ಮತ್ತು ಗೋಕುಲಾಷ್ಟಮಿ ವ್ರತಕ್ಕೆ ಸೌರಶ್ರಾವಣದ ಅವಶ್ಯಕತೆಯು ಧರ್ಮಶಾಸ್ತ್ರದ ಮರ್ಮ ವೆಂಬ ಉಪಪಾದನೆ ಆದರಣೀಯವಾಗಿದೆ.

ಶ್ರೀಶೃಂಗೇರಿ ಮಠದ ಪ್ರಾಚೀನ ಲೇಖನಮಾಲೆಗಳ ಯಥಾರ್ಥತೆಯನ್ನು ವಿವರಿಸಿ ಶ್ರೀಪುತ್ತಿಗಾ ಮಠದವರು ಮಾಡಿದ ಸ್ತುತ್ಯ ಕೆಲಸವನ್ನು ಅಪಚಾರವೆಂದು ಆರೋಪಿಸಿರುವುದನ್ನು ಅವಿಚಾರಿತವೂ ಅಸತ್ಯವೂ ಆಗಿದೆಯೆಂದು ಸ್ಪಷ್ಟಪಡಿಸಿ ಇತರ ಮಠಗಳ ದೂಷಣೆಗಳನ್ನೂ ಸಮರ್ಥ ಕಾರಣಗಳಿಂದ ನಿರಾಕರಿಸುವಲ್ಲಿ ಶ್ರೀ ಉಡುಪರು ಕೃತಕೃತ್ಯರಾಗಿದ್ದಾರೆ.

ಸಂಕುಚಿತ ಮನೋಭಾವದಿಂದ ಮತ್ತು ಒಂದು ವಿಭಾಗವನ್ನು ಶ್ರೇಷ್ಠವೆಂದು ಪ್ರತಿಪಾದಿಸುವ ಹಂಬಲದಿಂದ ಐತಿಹಾಸಿಕ ಆಧಾರಗಳನ್ನು ಅಪಾರ್ಥ ಮಾಡಿ ಅಪಲಾಪ ಮಾಡಲು ಹೊರಟ ಗ್ರಂಥಗಳಿಗೆ ಶ್ರೀ ಉಡುಪರ ಈ ಪುಸ್ತಕ ಸೂಕ್ತ ಉತ್ತರವಾಗಿದೆ. ಇಲ್ಲಿ ಯಾರ ಮನನೋಯಿಸುವಿಕೆಗೂ ಅರ್ಥವಿಲ್ಲ—ದ್ವೇಷಕ್ಕೂ ಎಡೆಯಿಲ್ಲ. ವಿಮರ್ಶಾತ್ಮಕವಾಗಿ, ಆಧಾರಪೂರ್ವಕ ಸಾಮಾಜಿಕವಾಗಿ, ಹಾಗೂ ಶಾಸ್ತ್ರೀಯವಾಗಿ ಯುಕ್ತಿಪೂರ್ವಕ ಸಂಶೋಧಿಸಿದ ಈ ಪುಸ್ತಕ ಇತಿಹಾಸದ ಮೇಲೊಂದು ಹೊಸ ಬೆಳಕನ್ನು ನೀಡಿದೆ. ಶ್ರೀ ಸೀತಾರಾಮ ಉಡುಪರ ಈ ಪ್ರಯತ್ನ ಆದರಣೀಯವೂ ಆಗಿದೆ. ವಿಚಾರಶೀಲರು ಈ ಪುಸ್ತಕದ ಪ್ರಯೋಜನವನ್ನು ಪಡೆಯುವಂತಾಗಲಿ. ಈ ಪುಸ್ತಕ ಪ್ರಕಟಣೆಯ ಶ್ರಮ ಸಾರ್ಥಕವಾಗಲಿ ಎಂದು ನಮ್ಮ ಆರಾಧ್ಯಮೂರ್ತಿ ಶ್ರೀಕೃಷ್ಣ ಶ್ರೀಪಾಂಡುರಂಗ ವಿಠಲದೇವರನ್ನು ಪ್ರಾರ್ಥಿಸುತ್ತೇವೆ.

ಇತಿ ಶ್ರೀಮನ್ನಾರಾಯಣ ಸ್ಮರಣೆಗಳು.

**ಶ್ರೀಮತ್ ಸುಜ್ಞಾನೇಂದ್ರತೀರ್ಥ ಶ್ರೀಪಾದಂಗಳವರು,**
**"ವಿದ್ಯಾವಲ್ಲಭ"**
**ಶ್ರೀಪುತ್ತಿಗೆ ಮಠ, ಉಡುಪಿ.**

# ಮೊದಲ ಮಾತು

"ನ ಸ್ನೇಹಾತ್ ನ ಚ ವಿಸ್ನೇಹಾತ್ ಯುಕ್ತ್ಯಾಕೃಷ್ಟೇನ ಕೇವಲಂ" ಎನ್ನುವಂತೆ ಈ ಗ್ರಂಥ ಬರೆಯಲು ಯುಕ್ತ್ಯಾಕರ್ಷಣೆಯೇ ಕಾರಣವಾಯಿತಲ್ಲದೆ ಯಾರ ಮೇಲಣ ದ್ವೇಷ, ಅಸೂಯೆ,ಗಳ ಕಾರಣದಿಂದಲ್ಲ. ಯಾವುದೇ ಪಕ್ಷ-ಪಂಗಡಗಳ ಮೇಲಿನ ಅಭಿಮಾನ ಮೂಲಕ ಅವರನ್ನು ಎತ್ತಿಹಿಡಿಯಬೇಕೆಂಬ ಸ್ನೇಹವಾಗಲೀ ಈ ಗ್ರಂಥ ಬರೆಯಲು ಕಾರಣವಾಗಿಲ್ಲ. "ಸರ್ವಃ ಕಾಂತಮಾತ್ಮಾನಂ ಪಶ್ಯತಿ" ಎಂಬಂತೆ ಪ್ರತಿಯೊಬ್ಬನೂ ತಾನು ತನ್ನದು ಎಂದು ಪ್ರೀತಿಸುತ್ತಾನೆ. ಇದು ಸಹಜವಾಗಿದೆ. ಅಂತಹ ಪ್ರಿಯ ವಸ್ತುವಿನ ಗುಣಧರ್ಮಗಳನ್ನು ಅನುಸರಿಸಿ ಉತ್ಪನ್ನವಾದ ಕ್ರಿಯೆ ಮಾನ್ಯವೂ ಗ್ರಾಹ್ಯವೂ ಆಗಬೇಕು, ಅದರಿಂದ ಜನತೆಯ ಮೇಲೆ ದುಷ್ಪರಿಣಾಮವಾಗಲಾರದು. ಆದರೆ ಇದರ ವಿರುದ್ಧವಾಗಿ ಬಣ್ಣಿಸುವ ವಸ್ತುವಿನಲ್ಲಿ ಅಂತಹ ಗುಣಗಳಿಲ್ಲದಿರುವಾಗ ಉಂಟೆಂದು ಗ್ರಹಿಸಿ ಮಾಡುವ ತೋರುವ ಪ್ರೀತಿ ಜನತೆಯ ಮೇಲೆ ತಪ್ಪು ತಿಳುವಳಿಕೆಯನ್ನು ಹರಡಿಸುವುದರಿಂದ ತ್ಯಾಜ್ಯವೆನಿಸುತ್ತದೆ.

ಶಿವಳ್ಳಿಯವರ ಕುರಿತು ಈ ಪುಸ್ತಕದಲ್ಲಿ ಶಾಸ್ತ್ರ ಶಾಸನ ಆಚಾರ ಸಂಪ್ರದಾಯಗಳಿಗನುಸರಿಸಿಯಲ್ಲದೆ ಕೇವಲ ಅಭಿಮಾನದ ಮಾತು ಕಾಣಸಿಗದು. ಶಿವಳ್ಳಿಯವರನ್ನು ವರ್ಣಿಸುವ ಕಾವ್ಯವೂ ಇದಲ್ಲ. ಹಾಗೆಯೇ ಸ್ಥಾನಿಕರ ಮತ್ತು ಇತರ ಯಾರ ಕುರಿತಾಗಲೀ ಶಾಸ್ತ್ರ ರೀತಿ ರಿವಾಜುಗಳ ವ್ಯತಿರಿಕ್ತವಾಗಿ ಯಾವುದೇ ತರದ ನಿಂದಾತ್ಮಕವಾದ ಪ್ರಚಾರಕ್ಕೂ ಇದನ್ನು ಬರೆದಿರುವುದಲ್ಲ. ಪ್ರತಿಪಕ್ಷಿಗಳು ತಮ್ಮ ಮಹತ್ವವನ್ನು ಬೇಕಾದಷ್ಟು ಬರೆದುಕೊಂಡಿದ್ದರೂ ಅದರ ಗೋಜಿಗೆ ಹೋಗುವುದು ನಮ್ಮ ಕೆಲಸವಲ್ಲ. ಆದರೆ ಪ್ರತಿಪಕ್ಷಿಗಳು ತಮ್ಮ ಶ್ರೇಷ್ಠತೆಯನ್ನಷ್ಟೇ ಹೇಳಿಕೊಳ್ಳದೆ ಅಲ್ಲಸಲ್ಲದ ಕ್ಷುಲ್ಲಕ ಕಾರಣಗಳನ್ನು ಮುಂದುಮಾಡಿ ಶಿವಳ್ಳಿಯವರನ್ನು ಪದೇ ಪದೇ ನಿಂದಿಸುವಾಗ ಅದನ್ನು ನೋಡಿ, ಕೇಳಿ, ಸುಮ್ಮನಿರುವ ಹೇಡಿಗಳಾಗಬಾರದು. ಆಧಾರ ಸಹಿತ ಅದನ್ನು ಪ್ರತಿಭಟಿಸುವ ದಿಟ್ಟತನ ಬೇಕೆಂದು ಈ ಪ್ರಕಟಣೆಯ ಸಾಹಸಕ್ಕಿಳಿಯಬೇಕಾಯಿತು. ಈ ಕುರಿತು ಯಾರಾದರೂ ಬೇಸರಪಟ್ಟರೆ ಅದಕ್ಕೆ ಉಪಾಯವಿಲ್ಲ. ನಾವು ಯಾರನ್ನೂ ಕೆಣಕಲು ಬಯಸುವುದಿಲ್ಲ. ಸಮಾಜದ ಪ್ರತಿಯೊಂದು ಪಂಗಡ ವ್ಯಕ್ತಿಗಳ ಮೇಲೆ ನಮಗೆ ಗೌರವ, ಆದರ, ಆತ್ಮೀಯತೆಗಳಿವೆ.

**ಈ ಗ್ರಂಥದ ರಚನೆಯ ಹಿನ್ನೆಲೆ**

1930ನೇ ಇಸವಿಯಲ್ಲಿ ಡಾಕ್ಟರ್ ಸಾಲೆತ್ತೂರರು ಶಿವಳ್ಳಿ ಸಮಾಜದ ಮೇಲೆ ಮತ್ತು ಶಿವಳ್ಳಿಯವರ ಗುರುಪೀಠಗಳ ಕುರಿತು ಅಪಮಾನಕರವಾದ ಮತ್ತು ಸರ್ವಥಾ

ನಡೆದಿರದ ಸಂಗತಿಗಳನ್ನು ಕಲ್ಪಿಸಿ ಬರೆದು ಅಪಮಾನಿಸಲು ಉಪಕ್ರಮಿಸಿದರು. ಇದ
ಕ್ಕಿಂತಲೂ ಮುಂಚೆ ಕೆಲವು ವರ್ಷಗಳ ಹಿಂದೆ ಪಾಶ್ಚಾತ್ಯ ಪಂಡಿತರಾದ ಥರ್ಸ್ಟನ್,
ಸ್ಟರಕ್, ಬುಕ್ಕನನ್ ಮೊದಲಾದವರು ಶಿವಳ್ಳಿಯವರ ವಿರುದ್ಧ ತಪ್ಪು ತಿಳುವಳಿಕೆ ಹುಟ್ಟಿ
ಸುವ, ವಸ್ತುಸ್ಥಿತಿಗೆ ವಿರುದ್ಧವಾದ, ಸಂಗತಿಗಳನ್ನು ಬರೆದಿದ್ದರು. ಇದೆಲ್ಲಾ ಗ್ರಂಥಗಳು
ಇಂಗ್ಲೀಷ್ ಭಾಷೆಯಲ್ಲಿ ಬರೆದಿರುವುದರಿಂದ ಇಂಗ್ಲೀಷ್ ತಿಳಿಯದವರಿಗೆ ತಿಳಿದು
ಕೊಳ್ಳಲು ಅವಕಾಶವಿರಲಿಲ್ಲ. ಇಂಗ್ಲೀಷ್ ಕಲಿತ ಭಾರತೀಯ ವಿದ್ವಾಂಸರು ಇಂಗ್ಲೀಷ್
ವಿದ್ಯಾಭ್ಯಾಸದ ಮೂಲಕ ಆರ್ಥಿಕ ಲಾಭ ಉಳ್ಳವರಾಗಿ ಡಾ| ಸಾಲೆತ್ತೂರರಂತೆ
ಇಂಗ್ಲೀಷರ ಕೂಡ ಸ್ವರ ಕೂಡಿಸಿದರೇ ವಿನಹ ತಾವು ಭಾರತೀಯರು ಎಂಬ ಕಡೆ
ಕೂಡಾ ಗಮನಿಸಲಿಲ್ಲ. ಆಂಗ್ಲರು ಬರೆದ ಇತಿಹಾಸದ ಕುರಿತು ಯಾವ ಪ್ರತಿಭಟನೆ
ಯನ್ನೂ ಸಲ್ಲಿಸಲಿಲ್ಲ. ಪ್ರತಿಭಟನಾಶೂನ್ಯವಾದ ಗ್ರಂಥಗಳಿಂದ ಜನತೆಯಲ್ಲಿ ತಪ್ಪು
ತಿಳುವಳಿಕೆ ವ್ಯಾಪಿಸಲು ಮತ್ತು ಅದೇ ಸತ್ಯವೆಂದು ಭಾವಿಸಲು ಎಡೆಯಾಯಿತು. ಈ
ಪರಿಣಾಮವಾಗಿ ಶಿವಳ್ಳಿ ಸಮಾಜದವರಿಗೆ ಒಪ್ಪಿಗೆ ಇಲ್ಲದ ಮತ್ತು ವಿರುದ್ಧವಾದ ಸರ
ಕಾರೀ ತೀರ್ಮಾನಗಳೂ ಏರ್ಪಟ್ಟು ಬಂಧನಕಾರಕವಾದವು. ಇದೀಗ ಇಂಗ್ಲೀಷ್
ಗ್ರಂಥಗಳ ವಿಷಯಗಳನ್ನು ಒಳಗೊಂಡ ಅನೇಕ ಗ್ರಂಥಗಳೂ ಹೊರಬಂದವು. ಅವು
ಗಳನ್ನು ಓದಿದ ಮೇಲೆ ಈ ಪುಸ್ತಕದ ಪ್ರಕಟಣೆಯೊಂದು ಅನಿವಾರ್ಯವೆಂದು ಮನಗಂಡ
ಈ ಉದ್ಯಮಕ್ಕೆ ಕೈಹಾಕಬೇಕಾಯಿತು.

ನಾನೇನೂ ನುರಿತ ಲೇಖಕನಲ್ಲ, ಗ್ರಂಥಕಾರನೂ ಅಲ್ಲ. ಆದುದರಿಂದ ಸಹಜ
ಸಿದ್ಧವಾದ ದೋಷಗಳನ್ನು ಓದುಗರು ಕ್ಷಮಿಸಬೇಕು. ಮತ್ತು ಅನಪೇಕ್ಷಿತ ಅಸಮಾ
ಧಾನಕರವಾದ ಮಾತುಗಳು ಹಿಂತೆಗೆದುಕೊಳ್ಳುವಂತಹದು ಇದ್ದರೆ, ಹಿಂತೆಗೆದು
ಕೊಳ್ಳಲು ನಾವು ಬದ್ಧರಿದ್ದೇವೆ. ಒಳ್ಳೆಯ ವಿಮರ್ಶಕರಿಗೆ, ಸಂಶೋಧಕರಿಗೆ ಶ್ರೇಷ್ಠ
ಗ್ರಂಥರಚನೆಗೆ ಮಾರ್ಗದರ್ಶಕವಾಗಲಿ ಎಂಬ ಆಶೆಯೊಂದಿಗೆ ಈ ಪುಸ್ತಕ ಪ್ರಕಟಣೆಯ
ಸಾಹಸಕ್ಕೆ ಮನಹರಿಸಿದೆವು. ಓದುಗರು ತಮ್ಮ ಅಭಿಪ್ರಾಯಗಳನ್ನು ತಿಳಿಸಿದಲ್ಲಿ ತಿದ್ದಿ
ಕೊಳ್ಳಲು ಅನುಕೂಲವಾಗುತ್ತದೆ.

ಡಾ| ಸಾಲೆತ್ತೂರರ "ಸ್ಥಾನಿಕರ ಪ್ರಾಧಾನ್ಯತೆ" ಶ್ರೀ ಐ. ಕೆ. ಶ್ರೀನಿವಾಸರಾಯರ
"ಸ್ಥಾನಿಕ ಬ್ರಾಹ್ಮಣರು" ಶ್ರೀ ಗುರುರಾಜ ಭಟ್ಟರ "ತುಳುನಾಡು" ಅಚ್ಯುತ ಶರ್ಮರ
"ಉಡುಪಿಯ ನೈಜ ಹಿನ್ನೆಲೆ" ಎಂಬ ಪುಸ್ತಕಗಳ ಕುರಿತು ಸ್ಥಾಲೀಪುಲಾಕನ್ಯಾಯ
ದಂತೆ ಪ್ರಾಧಾನ್ಯತಃ ಪರಾಮರ್ಶಿಸಲಾಗಿದೆ. ಒಂದು ಗ್ರಂಥದಲ್ಲಿ ಪರೀಕ್ಷಿಸಿದ ವಿಷಯ
ಗಳನ್ನು ಮತ್ತೊಂದು ಗ್ರಂಥದಲ್ಲಿ ಪುನಶ್ಚ ವಿಮರ್ಶಿಸುವುದಿಲ್ಲ. ಪ್ರತಿಪಕ್ಷೀಯರ ಮಾತು
ಗಳ ಮೇಲಿಂದಲೇ ಹೆಚ್ಚಾಗಿ ವಿರುದ್ಧ ವಾದವನ್ನು ನಿರಾಕರಿಸಲಾಗಿದೆಯಾದರೂ ಅನು
ಕೂಲವಾದ ಇತರ ಪ್ರಮಾಣಗಳನ್ನು ಉಪಯೋಗಿಸಿಕೊಳ್ಳಲಾಗಿದೆ. ಗಜೇಟಿಯರ್
ಮ್ಯಾನ್ಯುವೆಲ್, ಶಾಸನ, ಮೊದಲಾದುದನ್ನು ಪ್ರತಿಪಕ್ಷಗಳು ಮಹತ್ವದ ಆಧಾರವೆಂದು

ಗ್ರಹಿಸಿರುವುದರಿಂದ ಅವರ ಸಮಾಧಾನಕ್ಕಾಗಿ ಕೆಲವೆಡೆ ಅವುಗಳ ಮೇಲೆ ನಮಗೆ ಸಂಪೂರ್ಣವಾಗಿ ವಿಶ್ವಾಸವಿಲ್ಲದಿದ್ದರೂ ಉದಾಹರಿಸಲಾಗಿದೆ. ಆ ಗ್ರಂಥಗಳು ಭಾರತೀಯತೆಯಲ್ಲಿ ವಿಶ್ವಾಸವಿಲ್ಲದೆ ನಿಗೂಢವಾಗಿ ಭಾರತೀಯರನ್ನು ಹೀಯಾಳಿಸಿ ಪ್ರಚಾರ ಮಾಡಲು ಹೊರಟ ಗ್ರಂಥಗಳೆಂದು ಭಾವಿಸಲಾಗಿದೆ. ಶಾಸನಗಳು ಭಾರತೀಯವಾದರೂ ಅವುಗಳು ಇಂಗ್ಲೀಷರ ಮೂಲಕ ಪ್ರಕಟವಾಗುವಾಗ ಅವುಗಳಲ್ಲಿ ಅರ್ಥ ವಿಪರ್ಯಾಸವಾಗುವ ಸಂಭವವಿದೆ. ಹಾಗೆ ಅರ್ಥ ವಿಪರ್ಯಾಸ ಮಾಡಲಾದ ಅನುಭವವೂ ಇದೆ. ಪುರಾಣ ಗ್ರಂಥಗಳು ಹಾಗಲ್ಲ, ಸ್ಕಾಂದ ಪುರಾಣದ 50 ಖಂಡಗಳು ಭಾರತ ಭೂಮಿಯ ಎಲ್ಲಾ ಪ್ರದೇಶದ ಭೂವರ್ಣನೆಯಾಗಿದೆ. ಅಲ್ಲಿಯ ಕ್ಷೇತ್ರ ಬ್ರಾಹ್ಮಣಾದಿ ಜನರ ಇತಿಹಾಸವನ್ನು ಬರೆದಿಟ್ಟದ್ದಾಗಿದೆ. ಅದು ದುರುದ್ದೇಶದಿಂದ ಬರೆದದ್ದಲ್ಲ. ಹಾಗಿದ್ದರೆ ಅದರ ಮೇಲೆ ಮಹತ್ವ ಬುದ್ಧಿಯು ಜನತೆಯಲ್ಲಿ ಮೂಡಿರಲಿಕ್ಕಿಲ್ಲ. ಆದರೆ ಅರ್ವಾಚೀನ ಕಾಲದಲ್ಲಿ ರಾಗದ್ವೇಷ ಮೂಲಕ ಕೆಲ ಶ್ಲೋಕಗಳೂ ಪ್ರಕ್ಷಿಪ್ತವಾಗಿರಲೂಬಹುದು. ಆದರೆ ಆ ದೃಷ್ಟಾಂತದಿಂದ ಎಲ್ಲಾ ಪುರಾಣಗಳೂ ಅಪ್ರಾಮಣಿಕವೆನ್ನುವುದು ಬುದ್ಧಿವಂತಿಕೆಯಾಗಲಾರದು. ಇಂಗ್ಲೀಷರ ಅನುಕರಣೆಯಿಂದ ಭಾರತೀಯರಲ್ಲಿ ಹೊಸ ದಾರಿಯೊಂದು ಆರಂಭವಾಯಿತು. ಒಂದು ತಪ್ಪು ತೋರಿಸಿ ಆ ದೃಷ್ಟಾಂತದಿಂದ ಎಲ್ಲವೂ ತಪ್ಪು ಎಂದು ಪ್ರಚಾರ ಮಾಡುವ ಪರಿಪಾಠ ಆರಂಭವಾಯಿತು. ಒಳ್ಳೆಯ ವಿಚಾರಗಳನ್ನು ಬಿಟ್ಟು ದೋಷಗಳನ್ನು ಮಾತ್ರ ಪ್ರಚಾರ ಮಾಡುವುದು. ಇದು ಇತಿಹಾಸಕಾರರ ವಿಮರ್ಶಕರ ಮನೋಮಟ್ಟವನ್ನಷ್ಟೇ ತೋರಿಸಬಲ್ಲುದೇ ಹೊರತು ಇತಿಹಾಸದ ಮಹತ್ವಿಕೆಯನ್ನಲ್ಲ. ಪುರಾಣಗಳು ಸರಿಯಾಗಿ ಗುಣದೋಷಗಳನ್ನು ವಿಮರ್ಶಿಸಿ, ದುಷ್ಟವನ್ನು ದುಷ್ಟವೆಂದೂ, ಗುಣವನ್ನು ಗುಣವೆಂದೂ, ನಿರೂಪಿಸಿರುವುದನ್ನು ಕಾಣಬಹುದು. ಮತ್ತು ನಮ್ಮ ಇತಿಹಾಸವನ್ನು ನಾವು ನಿರೂಪಿಸಿರುವಲ್ಲಿ ನಮಗಿರುವ ಪಾವಿತ್ರ್ಯತೆಯು ಪರಕೀಯರಿಗೆ, ಅಥವಾ ಪರಕೀಯ ಬುದ್ಧಿಯಿಂದ ನಿರೂಪಿಸುವಲ್ಲಿ ಬರಲಾರದು. ಪರಕೀಯರು ಇತಿಹಾಸವನ್ನು ಬರೆಯುವಾಗ ಭಾರತೀಯರನ್ನು ಕೀಳುಮಟ್ಟದವರನ್ನಾಗಿ ತೋರಿಸುವ ಉದ್ದೇಶವಿಟ್ಟುಕೊಂಡಿದ್ದರೆಂಬುದನ್ನು ಗಮನಿಸದೆ ಮಧ್ಯಸ್ಥರಾಗಿ ಬರೆದಿದ್ದಾರೆಂದು ಭಾವಿಸಿದಾಗಲೇ ನಾವು ದಾರಿ ತಪ್ಪಿದ್ದೇವೆ. ಈ ವಿಚಾರಗಳನ್ನೂ ಈ ಪುಸ್ತಕದಲ್ಲಿ ವಿವೇಚನೆ ಮಾಡಲಾಗಿದೆ.

**ಸ್ಮರಣೆ**

ಸಂಶೋಧನಾತ್ಮಕವಾಗಿ ಜನತೆಯ ಮುಂದಿಟ್ಟ ಈ ಕೃತಿಯನ್ನು ಜನ ಅಭಿಮಾನದಿಂದ, ಆದರದಿಂದ ಸ್ವಾಗತಿಸುವರೆಂದು ಭಾವಿಸುತ್ತೇವೆ. ನಮ್ಮ ಉದ್ಯಮದಲ್ಲಿ ಪ್ರತ್ಯಕ್ಷವಾಗಿಯೂ, ಪರೋಕ್ಷವಾಗಿಯೂ, ಸಹಕರಿಸಿದವರಿಗೆ ನಮ್ಮ ಅಭಿನಂದನೆಗಳು.

ಅನೇಕ ಮಹನೀಯರೂ, ವಿದ್ವಾಂಸರೂ, ಸಲಹೆ-ಸಹಕಾರಗಳನ್ನೂ, ಮುದ್ರಣ ಕ್ಕಾಗಿ ಆರ್ಥಿಕ ಸಹಾಯವನ್ನಿತ್ತು ಪ್ರೋತ್ಸಾಹಿಸಿದ್ದಾರೆ. ಪ್ರೋತ್ಸಾಹಕರ ಉಪಕೃತಿ ಯನ್ನು ನಾವು ಸದಾ ಕೃತಜ್ಞತೆಯೊಂದಿಗೆ ಸ್ಮರಿಸುತ್ತೇವೆ.

ಅಂದವಾಗಿ ಮುದ್ರಿಸಿಕೊಟ್ಟ ಧರ್ಮಬೋಧ ವಿದ್ಯುನ್ಮುದ್ರಣಾಲಯ, ಉಡುಪಿ— ಇವರಿಗೂ ನಮ್ಮ ಅಭಿಮಾನದ ಅಭಿವಂದನೆಯನ್ನು ಸಲ್ಲಿಸಿ, ಮತ್ತೊಮ್ಮೆ ನಮಗೆ ನೆರವಿತ್ತ ಪ್ರತಿಯೊಬ್ಬರನ್ನೂ ಸ್ಮರಿಸಿ, ವಿಚಾರಶೀಲ-ಸಾಮಾಜಿಕರ ಕೈಗೆ ಈ ಪುಸ್ತಕ ವನ್ನು ಒಪ್ಪಿಸಲು ಸಂತೋಷಪಡುತ್ತೇವೆ.

ಇತಿ,

**ಸೀತಾರಾಮಾಚಾರ್ಯ ನಾರಾಯಣಾಚಾರ್ಯ ಉಡುಪ,**
**ಉಡುಪಿ.**

॥ श्रीः ॥

॥ श्रीविद्याशंकरो विजयते ॥

## कूडली श्रृंगेरी श्रीमज्जगद्गुरु श्रीसच्चिदानन्दशङ्करभारतीस्वामिभिः

अस्मदत्यन्तप्रियशिष्य कुञ्जारु ग्रामाभिजन विठलोपाध्याय श्रेयोभिवृद्धै कालत्रयविरचिताशीःपरम्परापुरस्सरनारायणः समुल्लसतुतराम् । एषमः पराभववत्सरीय वैशाखकृष्ण एकादशी सोमवासरपर्यन्तं महिषपुरपत्तने पूर्वाचार्यग्रथितभाष्याद्यवलोकनप्रवचनश्रीदेवताराधनादिजनितनिजानन्दानुभूत्या निवसामः । आसेतुहिमाचलविख्यात श्रीमदाद्यशंकरभगवत्पूज्यपादाचार्यऽविच्छिन्नपरम्परागतपीठविषयिणी भक्तिर्निरवधिकश्रेयोनिदानं खलु । सम्प्रति—

माध्वगीतातात्पर्यग्रन्थे त्रयोदशाध्यायचरमश्लोकगत "भूतप्रकृति मोक्षं च" इत्यस्य पदस्य "भूतानां प्रकृतेः मोक्षः" इति विवरणं कृतम् । राघवेन्द्रीय गीताविवृतावपि एतत्पदस्य "भूतानां जीवानां अचेतनप्रकृतेः सकाशात् मोक्षः येन इति तदमानित्वादिकं प्रागुक्त मोक्षसाधनं च ये विदुः ते ब्रह्म यान्ति इति स्पष्टतया व्याख्यानं कृत्वा माध्वगीतातात्पर्यगत एवार्थोऽनूदितः।

माध्वगीताभाष्येऽस्य पदस्य "भूतेभ्यः प्रकृतेश्च मोक्षसाधनं तदमानित्वादिकम्" इति प्रतिपादितम् ।

माध्वमतीयग्रन्थत्रयपर्यालोचनेन भूतशब्दस्य पृथिव्यादिभूत जड जीवचेतन उभयवाचकत्वं मध्वसिद्धान्तानुरोध्येव न विरोधि इति तदनुयायिनां प्रतिपादनावसरे नापसिद्धान्तदोषो भवति इति शम् । इति नारायणस्मृतयः ।

श्री० स० शं० भा० स्वामिनः ॥

# श्रीब्रह्मतन्त्रस्वतन्त्रपरकालास्थानम्

## महिषपुरी ।

॥ श्रीलक्ष्मीहयवदनलक्ष्मीनारायणाभ्यां नमः ॥

॥ श्रीरामानुजाय नमः ॥

॥ श्रीमते निगमान्तदेशिकाय नमः ॥

॥ श्रीब्रह्मतन्त्रस्वतन्त्रपरकालगुरुपरम्परायै नमः ॥

"भूतप्रकृति मोक्षं च" इति गीतासूक्तेः गीताभाष्ये "भूतेभ्यः प्रकृतेश्च मोक्षं" इति योजना श्रीमदानन्दतीर्थैरङ्गीकृता । श्रीगीतातात्पर्यनिर्णये श्रीमदानन्दतीर्थैरेव "भूतानां जीवानां प्रकृतेः अचेतनप्रकृतेः मोक्षं" इति योजनान्तरस्य कृतत्वात् योजनाद्वयस्याप्याचार्यसम्मतत्वात् भूतानां जीवानां इत्यर्थवर्णने अपसिद्धान्तदोषगन्धस्यापि नावकाशः इति श्रीमदाचार्यपादा अन्वगृह्णन् इति

श्रीमदाचार्याणां निर्देशानुसारेण समोदमावेदयति

श्रीकार्यम्.

**वेंकटदीक्षाचार्यः ॥**

॥ श्रीः ॥

क्षेत्रक्षेत्रज्ञयोरेवमन्तरं ज्ञानचक्षुषा ।
भूतप्रकृतिमोक्षं च ये विदुर्यान्ति ते परम् ॥ ३५ ॥

(भ. गी. अ. १३)

अस्मिन् श्लोके भूतप्रकृतिमोक्षम् इति पदस्य "भूतेभ्यः प्रकृतेश्च मोक्षसाधनं अमानित्वादिकम्" इति व्याख्या गीताभाष्ये श्रीमदानन्दतीर्थभगवत्पादैर्विहिता । तैरेव गीतातात्पर्ये "जीवानां अचेतनप्रकृतेः मोक्षं भूतप्रकृतिमोक्षम्" इति व्याख्या विहिता । भूतपदस्य पञ्चभूतार्थकत्वं जीवार्थकत्वं च सर्वसम्मतम् । भाष्योक्तार्थाङ्गीकारे भूतकारणप्रकृतिमोक्षकथनेनैव भूतमोक्षकथनस्यापि अर्थतः लाभेन भूतपदवैयर्थ्याशंकां जीवानामिति पदाध्याहारप्रसङ्गशङ्कनं च वारयितुं तात्पर्ये भूतपदस्य जीवार्थकत्वमेव भगवत्पादैः स्वीकृतमिति तात्पर्यार्थस्य विशेषतः सामञ्जस्यं ज्ञायते ।

अत्रत्यभूतपदस्य परस्परविरुद्धजडचेतनवाचित्वस्य भाष्ये तात्पर्ये च अङ्गीकारेऽपि जाड्यचैतन्ययोरेकत्रानङ्गीकारेण न विरोधप्रसक्तिः । तात्पर्ये अचेतनप्रकृतेरित्यत्र विद्यमानं अचेतनपदम् भूतपदार्थकथनार्थं नोक्तम् । अपितु "इयं प्रकृतिर्नलक्ष्मीः किन्तु जडं प्रधानमेव इति स्पष्टयितुमेव । अतस्तात्पर्ये भूतशब्दस्य जीवार्थत्ववादिनां मध्वसंप्रदायाचार्याणां भगवत्पादोक्त्यनुसारितैव । अतो न तेषां भगवत्पादोक्तिविरोधः नापि द्वैतसिद्धांतविरोधः । अतोऽत्र अपसिद्धांत कथनं न युक्तम् । इति सविनयं निवेदयिता ।

विदुषामनुचरः
**पोलकम् सु. श्रीरामशास्त्री**
शास्त्ररत्नाकरः पंडितराजः
मद्रपुर संस्कृतकलाशालायां अद्वैत वेदान्तप्रधानाध्यापकः
मद्रपुरी.

# ಶ್ರೀಸ್ಕಾಂದಪುರಾಣಂ

ಶ್ರೀವ್ಯಾಸಕೃತ 18 ಪುರಾಣಗಳ ಪೈಕಿ 13ನೇ ಪುರಾಣವು ಸ್ಕಾಂದಪುರಾಣ ವಾಗಿರುತ್ತದೆ. ಈ ಸ್ಕಾಂದಪುರಾಣವು ಒಂದು ಲಕ್ಷ ಶ್ಲೋಕಗಳನ್ನೊಳಗೊಂಡು 6 ಸಂಹಿತೆಗಳಿಂದಲೂ ಕೂಡಿದೆ ಎಂದು ಸೂತಸಂಹಿತೆಯಲ್ಲಿ ಉಕ್ತವಾಗಿದೆ.

"ಲಕ್ಷಂ ತು ಶ್ಲೋಕ ಸಂಖ್ಯಾಭಿಃ ಜ್ಞಾನವಿಜ್ಞಾನಸಾಗರಂ ।
ಸ್ಕಾಂದಮದ್ಯಾಭಿವಕ್ಷ್ಯಾಮಿ ಪುರಾಣಂ ಶ್ರುತಿಸಾರಜಂ ॥
ಷಡ್ವಿಧಂ ಸಂಹಿತಾಭೇದೈಃ ಪಂಚಾಶತ್ಖಂಡಮಂಡಿತಂ ।
ಆದ್ಯಾ ಸನತ್ಕುಮಾರೋಕ್ತಾ ದ್ವಿತೀಯಾ ಸೂತಸಂಹಿತಾ ॥
ತೃತೀಯಾ ಶಾಂಕರೀ ಪ್ರೋಕ್ತಾ ಚತುರ್ಥೀ ವೈಷ್ಣವೀ ತಥಾ ।
ಪಂಚಮೀ ಸಂಹಿತಾ ಬ್ರಾಹ್ಮೀ ಷಷ್ಠೀ ಸಾ. ಸೌರಸಂಹಿತಾ ॥"

ಎಂಬುದಾಗಿ ಶಾಂಕರ ಸಂಹಿತೆಯ ಹಾಲಾಸ್ಯ ಮಾಹಾತ್ಮ್ಯ ಖಂಡದಲ್ಲಿ ಸಹ ಉಕ್ತ ವಾಗಿದೆ. ಕಾಲಿಕಾ ಖಂಡದಲ್ಲಿ (ಅಂದರೆ) ಇದೇ ಸ್ಕಾಂದಪುರಾಣದ ಸಮಗ್ರಸ್ವರೂಪ ವನ್ನು ನಿರೂಪಿಸಿಯದೆ. ಅದರಲ್ಲಿ ಉಕ್ತವಾದ ವಿವರ.

| ಸಂಹಿತಾ | ಖಂಡ | ಅಧ್ಯಾಯ | ಶ್ಲೋಕ |
|---|---|---|---|
| 1. ಸನತ್ಕುಮಾರಸಂಹಿತಾ | 25 | 10 ಸಾವಿರ | 50 ಸಾವಿರ |
| 2. ಸೂತಸಂಹಿತಾ | 4 | 76 | 6 ಸಾವಿರ |
| 3. ಶಾಂಕರ | 21 | 2 ಸಾವಿರ | 30 ಸಾವಿರ |
| 4. ವೈಷ್ಣವ | — | 300 | 5 ಸಾವಿರ |
| 5. ಬ್ರಾಹ್ಮಿ | — | — | 3 ಸಾವಿರ |
| 6. ಸೌರ | — | — | 1 ಸಾವಿರ |

ಸನತ್ಕುಮಾರ ಸಂಹಿತೆ 25 ಖಂಡಗಳು ಕೆಳಗಿನಂತಿದೆ.

| | | | |
|---|---|---|---|
| 1. ಕ್ಷೇತ್ರ | 7. ವಿಂಧ್ಯಾದ್ರಿ | 13. ಶ್ರೀಶೈಲ | 19. ಸೇತು ಮಹಾತ್ಮ್ಯೆ |
| 2. ತೀರ್ಥ | 8. ಮೋಕ್ಷ | 14. ಅವಂತೀ | 20. ಕಾಲಿಕಾ |
| 3. ಕಾಶೀ | 9. ಪ್ರಭಾಸ | 15. ಕಾಶೀ | 21. ವ್ರತೋಪಾಖ್ಯಾನ |
| 4. ಸಹ್ಯಾದ್ರಿ | 10. ಪುಷ್ಕರ | 16. ಕುರುಕ್ಷೇತ್ರ | 22. ನದೀ |
| 5. ಹಿಮಾಚಲ | 11. ನಾಗರ | 17. ಕೇದಾರ | 23. ಧರ್ಮ |
| 6. ಮಲಯಾಚಲ | 12. ನರ್ಮದಾ | 18. ಹರಿಹರ | 24. ದೇಶ |

**25. ವರ್ಷ**

ಸೂತ ಸಂಹಿತಾದೊಳಗಿನ 4 ಖಂಡಗಳು—1. ಶಿವಮಾಹಾತ್ಮ್ಯ, 2. ಜ್ಞಾನ ಯೋಗ, 3. ಮುಕ್ತಿ, 4. ಯಜ್ಞ ವೈಭವ, ಇಂತಿವೆ. ಇನ್ನು ತೃತೀಯ ಶಾಂಕರ ಸಂಹಿತೆಯ 21 ಖಂಡಗಳು ಕೆಳಗಿನಂತೆ ನಿರೂಪಿತವಾಗಿವೆ.

| | | | |
|---|---|---|---|
| 1. ಶಿವರಹಸ್ಯ | 6. ಕಾಶ್ಮೀರ | 11. ಹಾಲಾಸ್ಯ | 16. ಪಾತಾಳ |
| 2. ನಿರ್ವಾಣ | 7. ಕೋಸಲ | 12. ಉತ್ಕಲ | 17. ಕೃಷ್ಣಾ |
| 3. ಅಂಬಿಕಾ | 8. ಬದರೀ | 13. ಮಾನಸ | 18. ಮಹಾಕಾಲ |
| 4. ಅರ್ಬುದಾಚಲ | 9. ಭೀಮಾ | 14. ತಾಪಿ | 19. ಭೈರವ |
| 5. ಕನಕಾದ್ರಿ | 10. ಶ್ರೀಶೈಲ | 15. ಕಾವೇರಿ | 20. ಪಿತೃ |

21. ಬ್ರಹ್ಮ

ಇವು ಸ್ಕಾಂದಪುರಾಣದ 50 ಖಂಡಗಳು: ಇನ್ನು ಚತುರ್ಥ, ಪಂಚಮಿ, ಷಷ್ಠೀ ಸಂಹಿತೆಗಳಲ್ಲಿ ಖಂಡಗಳು ಇರುವುದಿಲ್ಲ. ಇವುಗಳ ಪೈಕಿ ಸೂತಸಂಹಿತೆಗೆ ಸಾಯಣ ಮಾಧವರ ವ್ಯಾಖ್ಯಾನ ಉಂಟು. ಹಾಲಾಸ್ಯ ಮಾಹಾತ್ಮ್ಯ ಖಂಡವು ತಮಿಳು ಭಾಷೆಯಲ್ಲಿ ಭಾಷಾಂತರಿತವಾಗಿದೆ. ಕಾಶೀ ಖಂಡವು ತೆಲುಗು ಭಾಷೆಯಲ್ಲಿ ಪರಿವರ್ತಿತ ವಾಗಿದೆ. ನಿರ್ವಾಣ ಖಂಡದೊಳಗಿನ ರಾಮಗೀತೆಗೆ ಉಪೇಂದ್ರಾಶ್ರಮರೆಂಬವರ ಶಿಷ್ಯ ವಿಶ್ವರೂಪಭಾರತಿಯವರ ಅರ್ಥದೀಪಿಕಾ ಎಂಬ ವ್ಯಾಖ್ಯಾನವಿದೆ. ಇನ್ನು ಎಷ್ಟು ಭಾಷೆಯಲ್ಲಿ ಎಷ್ಟು ಖಂಡಗಳು ಪರಿವರ್ತಿತವಾಗಿದೆ ಎಂಬುದು ಸಂಶೋಧನೆಯಾಗ ಬೇಕು. ಅಂತೂ ಹೀಗೆ ಲೋಕಪ್ರಿಯವಾದ ಸ್ಕಾಂದಪುರಾಣವು ಸಂಪೂರ್ಣ ಭಾರತ ಭೂಮಿಯ ವರ್ಣನೆಯೇ ಆಗಿರುತ್ತದೆ. ಆದುದರಿಂದ "ಜ್ಞಾನವಿಜ್ಞಾನಸಾಗರಂ" ಎಂಬುದಾಗಿ ಹಿಂದೆ ಉದಾಹರಿಸಿದ ಶ್ಲೋಕದಲ್ಲಿ ಮಾಡಿದ ವರ್ಣನೆಯು ಯಥಾರ್ಥವೇ ಆಗಿದೆ. ಮತ್ತು ಈ ಆರು ಸಂಹಿತಾ 50 ಖಂಡಗಳ 1 ಲಕ್ಷ ಶ್ಲೋಕಾತ್ಮಕ ಸ್ಕಾಂದ ಪುರಾಣವು ಸೂತ ಸಂಹಿತೆಯನ್ನು ಕಂಡಿರುವ ನಮ್ಮ ಗುರುರಾಜ ಭಟ್ಟರಿಗೆ ಪರಿಚಿತ ವಾಗಿರುತ್ತದೆ. ಅವರು ತಮ್ಮ ಗ್ರಂಥದಲ್ಲಿ ಉಲ್ಲೇಖ ಸಹ ಮಾಡಿರುತ್ತಾರೆ.

(ತುಳುನಾಡು ಪೇಜು ೯೭)

"ಆದರೆ ಈ ಖಂಡಗಳಲ್ಲಿ ಯಾವುದು ಮುಂದೆ ಯಾವುದು ಹಿಂದೆ ಮತ್ತು ಯಾವ ಮಹಿಮೆಯು ಯಾವ ಸಂಹಿತೆಯಲ್ಲಿದೆ" ಎಂದು ನಿಶ್ಚಯಿಸಲಿಕ್ಕಾಗಲಿಲ್ಲವೆನ್ನುತ್ತಾರೆ. ಆದರೆ ಪೂರ್ವೋಕ್ತ ಕಾಲಿಕಾಖಂಡದ ಆಧಾರದ ಮೇಲಿಂದ ಅದನ್ನು ನಿಶ್ಚಯಿಸಬಹು ದೆಂದು ನನ್ನ ಸೂಚನೆ. ಆದುದರಿಂದ ತನ್ಮೂಲಕ ಕೊರತೆಯನ್ನು ನೀಗಿಸಬಹುದು.

"ನಾರದ ಪುರಾಣದೊಳಗಿನ ಸ್ಕಾಂದ ಅನುಕ್ರಮಣಿಕೆಯಲ್ಲಿ 7 ಖಂಡ 81 ಸಾವಿರ ಶ್ಲೋಕಾತ್ಮಕ ಮತ್ತು ಇದು ವ್ಯಾಸಕೃತ ಅಷ್ಟಾದಶದೊಳಗಿನದ್ದು ಎಂದು ಭಾಸವಾಗುತ್ತದೆ. ಏಕೆಂದರೆ ವ್ಯಾಸಕೃತ 18 ಪುರಾಣಗಳ ಅನುಕ್ರಮಣಿಕಾ ಮಾತ್ರ ನಾರದ ಪುರಾಣದಲ್ಲಿ ಉಕ್ತವಾಗಿದೆ. ಆದುದರಿಂದ ಇತರ ಖಂಡಗಳು ಸಂಹಿತೆಗಳು

ವ್ಯಾಸಕೃತಗಳಲ್ಲ ಎಂದು ಇನ್ನೊಂದು ಆಪಾದನೆ ಇದೆ. ಇದು ಸರಿಯಲ್ಲ. ಸ್ಕಾಂದ ಪುರಾಣದ ಬಹುಭಾಗದಲ್ಲಿ ಅಂದರೆ ಸಾಯಣಮಾಧವ ವ್ಯಾಖ್ಯಾಯುಕ್ತ ಸೂತ ಸಂಹಿತಾ, ಹಾಲಾಸ್ಯ ಮಾಹಾತ್ಮ್ಯ, ಕಾಲಿಕಾಖಂಡ ಇತ್ಯಾದಿ ಸ್ಥಳಗಳಲ್ಲಿ ಮತ್ತು ಭವಿಷ್ಯಪುರಾಣದಲ್ಲಿ 1 ಲಕ್ಷ ಶ್ಲೋಕ 6 ಸಂಹಿತಾ 50 ಖಂಡ ಸ್ಕಾಂದ ಉಕ್ತವಾದಾಗ ಅದು ಅಲ್ಲ. 7 ಖಂಡ 81 ಸಾವಿರ ಶ್ಲೋಕದ ಸ್ಕಾಂದವೇ ವ್ಯಾಸಕೃತವೆಂಬ ನಿರ್ಧಾರ ಹೇಗೆ ಸಮರ್ಥನೀಯ. ನಾರದ ಪುರಾಣದಲ್ಲಿ ಕಾಣುತ್ತಿರುವ ಅನುಕ್ರಮಣಿಕಾ ಅಧ್ಯಾಯಗಳು ವ್ಯಾಸಕೃತವೆಂದು ಭಾವಿಸಬೇಕಾಗಿಲ್ಲ. 18 ಪುರಾಣ ಛಾಪಾ ಹಾಕಿದವರು ತಮ್ಮ ಪುರಾಣವೇ ವ್ಯಾಸಕೃತವೆಂದು ಭಾಸಪಡಿಸಲಿಕ್ಕೋಸ್ಕರ ಬರೆದಿದ್ದಾರೆಂದು ಏಕೆ ತಿಳಕೊಳ್ಳಬಾರದು. ಪ್ರಚಲಿತ ವೆಂಕಟೇಶ ಛಾಪಖಾನೆಯಲ್ಲಿ ಪ್ರಿಂಟಾದ 7 ಖಂಡದ ಸ್ಕಾಂದಪುರಾಣದಲ್ಲಿ 12 ಸಾವಿರ ಶ್ಲೋಕಗಳ ರೇವಾಖಂಡವು ಸ್ವತಹ ಸ್ಕಾಂದಪುರಾಣದ್ದಾಗಿರದೆ ಅದು ಶಿವಪುರಾಣದ ಉತ್ತರಾರ್ಧವಾಗಿರುತ್ತದೆ. ಅದನ್ನು ಸೂಕ್ಷ್ಮ ಪರೀಕ್ಷಾ ಮಾಡಿದರೆ ತಿಳಿಯುತ್ತದೆ. 18 ಪುರಾಣಗಳನ್ನು ಮತ್ತು ಮಹಾಭಾರತವನ್ನು ಬರೆದ ಮೇಲೆ ಬರೆದಿರುವ ಶ್ರೀಮದ್ಭಾಗವತವು 18 ಪುರಾಣದೊಳಗಿನ 5ನೇ ಪುರಾಣವಾಗಲು ಹೇಗೆ ಶಕ್ಯವಿದೆ? ತಂತ್ರ, ಇತಿಹಾಸ, ಪುರಾಣ, ಎಂಬ ಮೂರು ವಿಧದ ಸ್ಮೃತಿಗ್ರಂಥಗಳ ಪೈಕಿ ಇತಿಹಾಸ ಪುರಾಣಗಳಿಗಿಂತ ಪಂಚರಾತ್ರದಂತೆ ಶ್ರೇಷ್ಠವಾದ ತಂತ್ರಭಾಗವತದ ಸಂಕ್ಷೇಪವು ಶ್ರೀಮದ್ಭಾಗವತವು. ಅತ ಏವ ಇತಿಹಾಸ ಪುರಾಣಗಳ ರಚನೆ ಆದ ಮೇಲೆ ತಂತ್ರಭಾಗವತದ ಸಂಕ್ಷೇಪವು ರಚಿತವಾಗಿ ಸದರಿ ಕೊರತೆ ನೀಗಿಸಬೇಕು ಎಂಬ ನಾರದ ಪ್ರಾರ್ಥನೆಗೆ ಅನುಸಾರ ಶ್ರೀಮದ್ಭಾಗವತವು ರಚಿತವಾಯಿತು. ಆದುದರಿಂದ ಅಷ್ಟಾದಶ ಪುರಾಣಾಂತರ್ಗತವಲ್ಲವೆಂಬುದು ನಿಜ. ತಂತ್ರಗ್ರಂಥವೆಂಬ ಅರಿವಿಲ್ಲದ ಜನರು ಪುರಾಣವಲ್ಲವಾದರೆ ಉಪಪುರಾಣವಾಗಬೇಕಾಗುತ್ತದೆಂದು ಗಾಬರಿಗೊಂಡು ಒಂದು ಸಾವಿರ ವರ್ಷಗಳಿಂದ ಅಂದರೆ 10 ಶತಮಾನದಿಂದ ಶಾಕ್ತ ವೈಷ್ಣವರೊಳಗೆ ಅಷ್ಟಾದಶಪುರಾಣಾಂತರ್ಗತ ಶ್ರೀಮದ್ಭಾಗವತ ವ ದೇವೀಭಾಗವತ ಎಂಬ ಚರ್ಚೆ ಇದೆ. ಇದರ ಕೂಲಂಕುಶ ವಿಚಾರ ಭಾಗವತ ನಿರೀಕ್ಷಣವೆಂಬ ಗ್ರಂಥದಲ್ಲಿ ಕಾಣಬಹುದು. ಆದರೆ ಶ್ರೀಮದ್ಭಾಗವತದ ಅನುಕ್ರಮಣಿಕಾ ನಾರದ ಪುರಾಣದಲ್ಲಿ ತೋರಿಸಲಾಗಿದೆ. ಅದು ಬರೆದವರ ಗ್ರಹಿಕೆ ಅಷ್ಟೇ. ಇತ್ಥಂಭೂತ ವಿಷಯವಲ್ಲ.

ಅಂತೂ ನಾರದ ಪುರಾಣದ ಅನುಕ್ರಮಣಿಕಾದ ಮೇಲಿಂದ 7 ಖಂಡಾತ್ಮಕ ವೆಂಕಟೇಶ ಛಾಪಖಾನೆಯ ಸ್ಕಾಂದವೇ ವ್ಯಾಸಕೃತವೆಂದಾಗಲಾರದು. ಮಹನೀಯರ ವ್ಯಾಖ್ಯಾನ, ಸ್ಕಾಂದಪುರಾಣವೆಂಬ ಅಬಾಧಿತ ಪ್ರಸಿದ್ಧಿ ಮೊದಲಾದವುಗಳಿಂದ 1 ಲಕ್ಷ ಶ್ಲೋಕ 6 ಸಂಹಿತಾ 50 ಖಂಡಗಳುಳ್ಳ ಸೂತ ಸಂಹಿತೋಕ್ತವೇ ವ್ಯಾಸಕೃತ ಸ್ಕಾಂದ ಪುರಾಣವು.

ಛಾಪಾಕಾರರು ತಮಗೆ ಸಿಕ್ಕ ಭಾಗಗಳನ್ನಷ್ಟೇ ಛಾಪಿಸಿ ಗ್ರಂಥ ಪೂರ್ತಿಯಾಯಿತೆಂದು ಭಾಸಪಡಿಸುತ್ತಾರೆ. ಉದಾಹರಣೆ—

1. ಕೂರ್ಮ ಪುರಾಣವು 4 ಸಂಹಿತಾತ್ಮಕವಾಗಿದ್ದು ಅದರ ಪೈಕಿ ಮೊದಲನೆಯ ಸಂಹಿತಾ ಮಾತ್ರ ಛಾಪಿಸಿ ಕೂರ್ಮಪುರಾಣ ಮುಗಿಸಲಾಗಿದೆ.
2. ವರಾಹ ಪುರಾಣವು ಪೂರ್ವಾರ್ಧ ಮಾತ್ರ ಛಾಪಿಸಿ ಉತ್ತರಾರ್ಧ ಛಾಪಾ ಆಗದೆ ಅಷ್ಟುಮಾತ್ರಕ್ಕೆ ಮುಗಿಸಿರುತ್ತದೆ.
3. ವಿಷ್ಣುಪುರಾಣ 6 ಅಂಶಗಳಷ್ಟು ಪೂರ್ವಾರ್ಧ ಮಾತ್ರ ವಿಷ್ಣುಪುರಾಣವಾಗಿ ವಿಷ್ಣುಧರ್ಮೋತ್ತರವೆಂಬ ಉತ್ತರಾರ್ಧ ಉಪಪುರಾಣವಾಗಿ ಗಣಿಸಲ್ಪಟ್ಟಿದೆ.

ಅದರಂತೆ ಸ್ಕಾಂದಪುರಾಣದ 50 ಖಂಡಗಳ ಪೈಕಿ 7 ಖಂಡಗಳನ್ನಷ್ಟೇ ಛಾಪಿಸಿ ವೆಂಕಟೇಶ ಛಾಪಖಾನಾದಲ್ಲಿ ಸ್ಕಾಂದಪುರಾಣ ಮುಗಿಸಿದ್ದಾರೆ. ಅದರ ಸಂಶೋಧನ, ಶುದ್ಧೀಕರಣ, ಮೊದಲಾದ ಕಾರ್ಯಗಳನ್ನು ಮಾಡಿ ಛಾಪೆ ಹಾಕಬೇಕು. ಇದು ಪಂಡಿತರ ಕರ್ತವ್ಯ.

ಗುರುರಾಜ ಭಟ್ಟರು ಸಹ್ಯಾದ್ರಿಖಂಡವನ್ನು ತೆಗಳುವುದಕ್ಕೋಸ್ಕರ ಉಪಯೋಗವಾಗುತ್ತದೆಂದು ಸಪ್ತಖಂಡಾತ್ಮಕ ಅಸಂಶೋಧಿತ ಸ್ಕಾಂದವೇ ವ್ಯಾಸಕೃತವೆಂದು ಸಿದ್ಧಾಂತಮಾಡಲು ಹತ್ತಿದ್ದಾರೆ.

ಶ್ರೀವ್ಯಾಸರು 18 ಪುರಾಣಗಳಿಗೆ 4 ಲಕ್ಷ ಗ್ರಂಥಗಳೆಂದು ಗೊತ್ತುಮಾಡಿದ್ದಾರೆ. ಇಡೀ ಸಹ್ಯಾದ್ರಿಖಂಡವನ್ನು ಕೂಡಿಸಿದರೆ ಜಾಸ್ತಿ ಆಗುತ್ತದೆ. ಕಾರಣ ವ್ಯಾಸಕೃತ ಸ್ಕಾಂದದಲ್ಲಿ ಸಹ್ಯಾದ್ರಿ ಇರುವುದಿಲ್ಲವೆಂಬ ಮತ್ತೊಂದು ಆಕ್ಷೇಪ. ಅವರ ಅಭಿಪ್ರಾಯ ಪ್ರಕಾರ ವ್ಯಾಸಕೃತವೆಂಬ ಸಪ್ತಖಂಡಾತ್ಮಕ ಸ್ಕಾಂದದಲ್ಲಿ ಸ್ಕಾಂದಪುರಾಣದಲ್ಲಿದ್ದ ಮತ್ತು ಶಿವಪುರಾಣ ಉತ್ತರಾರ್ಧವನ್ನು ಸ್ಕಾಂದಪುರಾಣದ ರೇವಾಖಂಡವೆಂಬುದಾಗಿ 12 ಸಾವಿರ ಶ್ಲೋಕಗಳನ್ನು ತೋರಿಸಿಕೊಟ್ಟದ್ದಾಗಿದೆ ಎಂದು ಈ ಮೊದಲೇ ನಿರೂಪಿಸಿದ್ದೇನೆ. ಹೀಗೆ ಬೇರೆ ಬೇರೆ ಗ್ರಂಥಗಳ ದೊಡ್ಡ ಭಾಗಗಳನ್ನು ಸೇರಿಸಿ ಸ್ಕಾಂದವೆಂದು ಕೊಂಡರೆ 7 ಖಂಡ ಏಕೆ? 4 ಖಂಡಕ್ಕೆ 1 ಲಕ್ಷ ಶ್ಲೋಕ ಕೂಡಾ ಆಗಬಹುದು. ವ್ಯಾಸಕೃತ ಖಂಡಗಳು ಸಣ್ಣದು ಇರುತ್ತಿದ್ದು ಅದು ಉಪಬೃಂಹಣ ಆಗಿರಬಹುದು. 50 ಖಂಡವೂ ವ್ಯಾಸಕೃತವಲ್ಲವೆನ್ನುವುದಕ್ಕೆ ಇಷ್ಟುಮಾತ್ರ ಆಧಾರವಾಗಲಾರದು. ಮೇಲಾಗಿ 18 ಪುರಾಣದೊಳಗೆ ಬೇರೆ ಎಷ್ಟೋ ಭಾಗಗಳು ಇರುವಾಗ ಸ್ಕಾಂದದಲ್ಲಿ ಸಹ್ಯಾದ್ರಿಖಂಡ ಸೇರುವುದರಿಂದಲೇ ಸಂಖ್ಯಾ ಹೆಚ್ಚು ಆಗುತ್ತಿರುವುದು ಎಂಬ ತೀರ್ಮಾನ ಅಸಮಂಜಸ ಮತ್ತು ಸ್ವಾರ್ಥಸಾಧನಪರವಾದದ್ದು. ಈಶ್ವರಾವತಾರನೆಂದು ಹೊಗಳುತ್ತಿರುವ ತ್ರಿಕಾಲಜ್ಞಾನಿಯೆಂದು ಭಾವಿಸಲ್ಪಡುವ ಶ್ರೀವೇದವ್ಯಾಸರು ತುಳುದೇಶದವರಲ್ಲ-ತುಳು ಭಾಷಾ ಗೊತ್ತಿಲ್ಲವೆಂಬುದು ಸಾಹಸದ ಮಾತು. ಇಷ್ಟುಮಾತ್ರಕ್ಕಾಗಿ

ಇಡೀ ಸಹ್ಯಾದ್ರಿ ವ್ಯಾಸಕೃತವಲ್ಲವೆನ್ನುವುದಕ್ಕಿಂತ ಅಷ್ಟು ಭಾಗ ಮಾತ್ರ ವ್ಯಾಸಕೃತ ವಲ್ಲವೆನ್ನಲೂಬಹುದು. ಬುಟ್ಟಿಯೊಳಗಿನ 4-6 ಹಣ್ಣುಗಳು ಕೊಳೆತಿದ್ದುವು ಎಂದರೆ ಬುಟ್ಟಿಯೇ ಕೊಳೆತ ಹಣ್ಣಿನ ಬುಟ್ಟಿಯಾಗಲಾರದು. ಛಾಪಾ ಆದ ಸಹ್ಯಾದ್ರಿಯಲ್ಲಿ ತುಳು ಶಬ್ದದ ಕುಲನಾಮಗಳು ಉಕ್ತವಾಗಿಲ್ಲ. 1865ನೇ ಇಸವಿಯಲ್ಲಿ 18 ಪುರಾಣ ಗಳನ್ನು ಛಾಪಿಸುವಾಗ ಸಂಶೋಧನೆಗೆ ಸೇರಿದ ಘನವಿದ್ವಾಂಸರು ಶ್ರೀ ಗುರುರಾಜ ಭಟ್ಟರಂಥ ವಿದ್ವಾಂಸರೇ ಆಗಿರಬೇಕು. ಅತಏವ 50 ಖಂಡಗಳ ಪೈಕಿ ಸಹ್ಯಾದ್ರಿ ಖಂಡವೊಂದೇ ಪಾಟಾಳಿ ಉತ್ಪತ್ತಿಯನ್ನು ಹೇಳಿರುವುದರಿಂದ ಅದು ಅಪ್ರಮಾಣವೆಂಪೂ ತನ್ಮೂಲಕ ಸಹ್ಯಾದ್ರಿಖಂಡ ಅಡಕವಾಗಿರುವ ಸ್ಕಾಂದಪುರಾಣವೂ ಪರಿಶುದ್ಧವಾದುದಲ್ಲ ವೆಂಮೂ ತೀರ್ಮಾನವಿತ್ತಿದ್ದಾರೆ. ಕಾಶಿಯಿಂದ ಕೊಚ್ಚಿತನಕ ಎಲ್ಲೆಲ್ಲಿಯೂ ಇರುವ ಸ್ಕಾಂದಪುರಾಣಾಂತರ್ಗತವೆಂದಿರುವ ಸಹ್ಯಾದ್ರಿಯು ಭಟ್ಟರಿಗೆ ಬೇಕಿಲ್ಲವೆಂತ ತಿರಸ್ಕ ರಣೀಯವಾಗಲಾರದು. ನವೀನ ಕಲ್ಪನಾಗ್ರಂಥವೂ ಆಗಲಾರದು. "ಸ್ಕಾಂದಪುರಾಣವು ಸೀಮೆಯಲ್ಲಿ ಸ್ವಲ್ಪ ಅನಿಶ್ಚಿತವಾದದ್ದು" ಎಂಬ ಭಟ್ಟರ ವಾದವು ಅಸಮರ್ಥ ನೀಯ. ಏಕೆಂದರೆ ಸ್ಪಷ್ಟವಾಗಿ 1 ಲಕ್ಷ ಶ್ಲೋಕ 6 ಸಂಹಿತಾ 50 ಖಂಡವೆಂಬುದಾಗಿ ಅದರ ಸ್ವರೂಪವು ಉಕ್ತವಾದಾಗ ಮಿತಿ ಸೀಮೆ ಅನಿಶ್ಚಿತವೆಂಬ ಮಾತಿನ ಅರ್ಥವೇನು? ಎಲ್ಲಾ ಪುರಾಣಗಳು ಹೇಗೋ ಹಾಗೆನೇ ಸ್ಕಾಂದವೂ ಇದೆಯಾಗಿ ಅದು ಭಾರತ ಭೂಮಿಯ ಸಕಲ ತೀರ್ಥಕ್ಷೇತ್ರಗಳ ಮಾಹಾತ್ಮ್ಯ ನಿರೂಪಣೆಗೆ ಮೀಸಲಾಗಿದ್ದು ಸಕಲ ಭೂಗೋಳ ವರ್ಣನೆಯಾಗಿದೆಯೆಂದು ಈ ಮೊದಲೇ ಉಕ್ತವಾಗಿದೆ. ತಮ್ಮ ಸ್ವಾರ್ಥಕ್ಕೆ ಅನುಕೂಲವಾಗುವುದಿಲ್ಲ ವ ಪ್ರತಿಕೂಲವಿದೆಯೆಂದು ಈ ಕಾರಣದಿಂದಲೇ ಪುರಾಣವನ್ನೇ ಆಗಲಿ ಇತರ ಯಾವುದನ್ನೇ ಆಗಲಿ ನಿಂದಿಸುವುದು ವಿದ್ವಾಂಸರಿಗೆ ಭೂಷಣವಲ್ಲ.

"ಗುಣದೋಷೌ ಬುಧೋ ಗೃಹ್ಣನ್ ಇಂದುಕ್ಷ್ವೇಡಾವಿವೇಶ್ವರಃ |
ಶಿರಸಾ ಶ್ಲಾಘತೆ ಪೂರ್ವಂ ಪರಂ ಕಂಠೆ ನಿಯಚ್ಛತಿ ||"

ಮಹಾದೇವರು ಸಮುದ್ರಮಥನ ಕಾಲದಲ್ಲಿ ಉತ್ಪನ್ನಗಳಾದ ಅನೇಕ ವಸ್ತುಗಳ ಪೈಕಿ ಚಂದ್ರನನ್ನು ತಲೆಮೇಲಿಟ್ಟುಕೊಂಡು ಕೊಂಡಾಡಿದರು. ವಿಷವನ್ನು ಕಂಠದಲ್ಲಿಟ್ಟು ಕೊಂಡು ಅಡಗಿಸಿದರು. ಅದರಂತೆನೇ ವಿದ್ವಾಂಸರು ವಸ್ತುಗಳಲ್ಲಿಯ ಗುಣದೋಷ ಗಳನ್ನು ಗ್ರಹಿಸಿ ಗುಣಗಳನ್ನು ಹೊಗಳಬೇಕು, ಕೊಂಡಾಡಬೇಕು, ದೋಷಗಳನ್ನು ಅಡಗಿಸಿಡಬೇಕು, ಮುಚ್ಚಬೇಕು. ಹೀಗೆ ವಿದ್ವಾಂಸರ ಲಕ್ಷಣ ಉಕ್ತವಾಗಿದೆ.

"ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾಹಿತಾಃ" ಎಂದು ಶ್ರೀಮದ್ಭ ಗವದ್ಗೀತೆಯಲ್ಲಿ ದೋಷವಿಲ್ಲದ ವಸ್ತುವಿಲ್ಲವೆಂದಿದ್ದಾರೆ. ಆದುದರಿಂದ ದೋಷಗಳನ್ನು ಬದಿಗಿರಿಸಿ ಗುಣಗಳನ್ನು ಅರಿತುಕೊಳ್ಳಲು ಶ್ರಮಿಸಬೇಕಾದಾಗ ಗುಣಗಳನ್ನೇ ಬದಿಗಿರಿಸಿ ದೋಷಗಳನ್ನೇ ಉದ್ಧುದ್ಧ ಮಾಡುತ್ತಿರುವುದು ಆಶ್ಚರ್ಯದ ಸಂಗತಿ. ಅಂತೂ 18

ಪುರಾಣಗಳ ಪೈಕಿ ಸ್ಕಾಂದ ಪುರಾಣವು ಇತರ ಪುರಾಣಗಳಂತೇನೆ ಇದೆಯಾಗಿ ಇದಕ್ಕೆ ಪ್ರತ್ಯೇಕವಾಗಿ ದೂಷಣೆಮಾಡಿಸಿಕೊಳ್ಳಬೇಕಾದ ಪ್ರಾತಿಸ್ವಿಕ ಕಾರಣವು ಇರುವುದಿಲ್ಲ. ವ್ಯಾಸಕೃತವೂ ಹೌದು. 50 ಖಂಡ ಉಳ್ಳದ್ದೂ ಹೌದು.

## ಸಹ್ಯಾದ್ರಿಖಂಡ

ಸಹಾದ್ರಿಖಂಡವು ಹಿಂದೆ ಹೇಳಿದಂತೆ ಸ್ಕಾಂದ ಪುರಾಣದ ಮೊದಲನೇ ಸನತ್ಕುಮಾರ ಸಂಹಿತೆಯ 4ನೇ ಖಂಡವಾಗಿರುತ್ತದೆ. ಶ್ರೀ ಗುರುರಾಜ ಭಟ್ಟರು "ಸಹ್ಯಾದ್ರಿ ಖಂಡ ಅರ್ಬುದಾಚಲಖಂಡವೆಂಬುದಾಗಿ ಖಂಡಗಳ ಒಂದು ಪಟ್ಟಿಯನ್ನು ತೋರಿಸಿ ಇವೆಲ್ಲಾ ಸ್ಕಾಂದ ಪುರಾಣದಲ್ಲಿ ಅಡಕವಾಗಿದೆಯೆಂದು ಪ್ರಚಲಿತವಿದೆ" ಎಂದು ತುಳುನಾಡು 98ನೇ ಪೇಜಿನಲ್ಲಿ ಬರೆದಿರುತ್ತಾರೆ. ಆದರೆ "ಆ ಮಹಾ ಪುರಾಣಕ್ಕೆ ಕಾಲಾನುಕ್ರಮವಲ್ಲಿ ಸೇರಿಸಲ್ಪಟ್ಟಿರಬೇಕು" ಅಂತ ಅವರ ಅಭಿಪ್ರಾಯ. ಇದಕ್ಕೆ ಕಾರಣವೇನೆಂದರೆ ವೆಂಕಟೇಶ ಛಾಪಖಾನಾದಲ್ಲಿ 7 ಖಂಡ ಸ್ಕಾಂದ ಪುರಾಣವೇ ವ್ಯಾಸಕೃತವೆಂದು ನಾರದ ಪುರಾಣದ ಅನುಕ್ರಮಣಿಕಾದ ಮೇಲಿಂದ ತೀರ್ಮಾನಿಸಿದ್ದಾರೆ. ಆದುದರಿಂದ 7ಕ್ಕಿಂತ ಹೆಚ್ಚಿನ 50ರ ತನಕ ಖಂಡಗಳು ಕಾಲಾನುಕ್ರಮದಿಂದ ಆ ಮಹಾ ಪುರಾಣದಲ್ಲಿ ಸೇರಿಕೆಯಾದ ಕೃತಕಭಾಗಗಳು ಅಂತ ಅಭಿಪ್ರಾಯವಾಗಿದೆ. ಆದರೆ ಅವರ ಆ ಅಭಿಪ್ರಾಯ ಪ್ರಾಮಾಣಿಕವಲ್ಲ. 50 ಖಂಡಾತ್ಮಕ ಸ್ಕಾಂದವೇ ವ್ಯಾಸಕೃತವೆಂಬುದನ್ನು ಪೂರ್ವ ಪ್ರಕರಣದಲ್ಲಿ ಸ್ಪಷ್ಟಗೊಳಿಸಿಯದೆ. ಸಹ್ಯಾದ್ರಿಖಂಡವು ಮೊದಲಿನಿಂದಲೂ ವ್ಯಾಸಕೃತ 50 ಖಂಡಾತ್ಮಕ, ಸ್ಕಾಂದ ಪುರಾಣದೊಳಗಿನದ್ದೇ ಆಗಿದೆ. ಇದರಲ್ಲಿ ಯಾವ ಸಂದೇಹವೂ ಇರುವುದಿಲ್ಲ. ಕಾಲಕ್ರಮದಿಂದ ಸೇರಿದ್ದು ಎಂಬ ಕಲ್ಪನೆಯು ತಪ್ಪು ತಿಳುವಳಿಕೆಯನ್ನು ಆಧರಿಸಿಯದೆ. ಮಿಸ್ಟರ್ ಥರ್ಸನ್ ಕುನ್ಹಾ ಎಂಬ ಪಾಶ್ಚಾತ್ಯ ಸಂಶೋಧಕರು ಕಾಶಿಯಿಂದ ಕೊಚ್ಚಿ ವರೇಗಿನ ಬೇರೆಬೇರೆ ಹಸ್ತಲಿಖಿತ ಪ್ರತಿಗಳನ್ನು ತರಿಸಿ ಜಮಾಯಿಸಿ ಸಂಶೋಧಿಸಿ ಒಂದು ಪ್ರತಿ ಛಾಪಿಸಿ ತೆಗೆದು ಪ್ರಕಟಿಸಿದ್ದಾರೆ. ಅದರಲ್ಲಿ ಪೂರ್ವಾರ್ಧ ಮತ್ತು ಉತ್ತರಾರ್ಧ ಅಂತ 2 ಭಾಗಗಳು ಇದ್ದು ಇದೇ ಖಂಡದಲ್ಲಿ ಸೇರಲು ಯೋಗ್ಯವಾದ 6 ಮಹಾತ್ಮ್ಯಗಳು ಸಹ ಇರುತ್ತವೆ. ಅದರಲ್ಲಿ ಅಧ್ಯಾಯಾಂತ್ಯದಲ್ಲಿ "ಇತಿ ಶ್ರೀಸ್ಕಾಂದೆ ಸನತ್ಕುಮಾರ ಸಂಹಿತಾಯಾಂ ಸಹ್ಯಾದ್ರಿ ಖಂಡೆ ಉತ್ತರ ರಹಸ್ಯೆ" ಇತ್ಯಾದಿ ವಾಕ್ಯ ಕಂಡುಬರುವುದರಿಂದಲೂ ಕಾಲಿಕಾ ಮಹಾತ್ಮ್ಯೆ ಖಂಡದಲ್ಲಿ 4ನೇಯದಾಗಿ ಪರಿಗಣಿತವಾದ ಸಹ್ಯಾದ್ರಿಯು ಇದೇ ಎಂದು ನಿರ್ಧರಿಸಲು ಸಾಧ್ಯವಿದೆ.

ಸದರಿ ಛಾಪಾಹಾಕಿದ ಸಹ್ಯಾದ್ರಿಖಂಡದ ಸ್ವರೂಪ ಇಂತಿದೆ.

| | | |
|---|---|---|
| ಪೂವಾರ್ಧ | 67 ಅಧ್ಯಾಯ | 3557 ಶ್ಲೋಕಗಳು |
| ಉತ್ತರಾರ್ಧ | 21 ಅಧ್ಯಾಯ | 1142 ಶ್ಲೋಕಗಳು |

| | | |
|---|---|---|
| ರೇಣುಕಾ ಮಾಹಾತ್ಮ್ಯೆ | 40 ಅಧ್ಯಾಯ | 1025 ಶ್ಲೋಕಗಳು |
| ಚಂದ್ರಚೂಡ ಮಾಹಾತ್ಮ್ಯೆ | 8 ಅಧ್ಯಾಯ | 143 ಶ್ಲೋಕಗಳು |
| ನಾಗಾಹ್ವಯ ಮಾಹಾತ್ಮ್ಯೆ | 5 ಅಧ್ಯಾಯ | 79 ಶ್ಲೋಕಗಳು |
| ಕಾಮಾಕ್ಷಿ ಮಾಹಾತ್ಮ್ಯೆ | 4 ಅಧ್ಯಾಯ | 130 ಶ್ಲೋಕಗಳು |
| ಮಾಂಗೀಶ ಮಾಹಾತ್ಮ್ಯೆ | 12 ಅಧ್ಯಾಯ | 457 ಶ್ಲೋಕಗಳು |

ಹೀಗೆ ಛಾಪಾಹಾಕಿದ ಸಹ್ಯಾದ್ರಿಖಂಡ ಪುಸ್ತಕದಲ್ಲಿ ಒಟ್ಟು 156 ಅಧ್ಯಾಯಗಳು ಮತ್ತು 6587 ಶ್ಲೋಕಗಳು ಇರುತ್ತವೆ. ಉತ್ತರ ಭಾಗ ಮಾತ್ರ 21 ಅಧ್ಯಾಯಗಳು. ತುಳುನಾಡು ಪುಸ್ತಕ ಪೇಜು 99 "ದ್ವಾತ್ರಿಂಶಗ್ರಾಮ ಪದ್ಧತಿ" ಎಂಬ ಇನ್ನೊಂದು ಗ್ರಂಥವನ್ನು ಗುರುರಾಜ ಭಟ್ಟರು ತೋರಿಸಿಕೊಟ್ಟಿರುತ್ತಾರೆ. ಇದು ಪ್ರಾಯಶಃ ರಾಯಲ್ ಏಸ್ಯಾಟಿಕ್ ಸೊಸ್ಯಾಟಿ ಲೈಬ್ರೇರಿಯ ಕ್ಯಾಟಲಾಗದ 22—6—64, 1ನೇ ಭಾಗ 88 ಅಧ್ಯಾಯ, 2ನೇ ಭಾಗ 32 ಅಧ್ಯಾಯವೆಂದು ಗುರುತಿಸಲಾದ ಸಹ್ಯಾದ್ರಿಯ ಉತ್ತರಭಾಗವೇ ಆಗಿರಬೇಕು. ಹೊಸಬಾಳೆ ಗ್ರಾಮ ನಿವಾಸಿ ಅನಂತಶರ್ಮ ಎಂಬವರು ಪ್ರಕಟಿಸಿದ 34 ಅಧ್ಯಾಯಗಳುಳ್ಳ ಉತ್ತರ ಸಹ್ಯಾದ್ರಿ ಖಂಡವನ್ನು ಗುರುರಾಜ ಭಟ್ಟರು ಬರೆದಿರುತ್ತಾರೆ. ಮತ್ತು ಸಹ್ಯಾದ್ರಿಖಂಡದಿಂದ ಆಯ್ದಭಾಗವೆಂದು ಹೇಳುತ್ತಾರೆ. ಇದರಿಂದ ಮೂಲ ವಿಷಯವನ್ನು ವ್ಯಾಸಕೃತ ಸಹ್ಯಾದ್ರಿಖಂಡದಿಂದ ಆಯ್ದು ಪೂರಕವಾದ ವ್ಯಾಖ್ಯಾನ ವಿವರಣಗಳಿಂದ ಉಪಬ್ರಂಹಣವನ್ನು ಪಡೆದುಕೊಂಡದ್ದಾಗಿ ತಿಳಿಯುತ್ತದೆ. ಅದು ಏನೇ ಇರಲಿ ಅದರಿಂದ ಮಾಹಿತಿ ಸಿಗಲು ಸಾಧ್ಯವಿದೆ.

ಥರ್ಸನ್ ಕುನ್ಹಾರವರ ಅದರ್ಶವಾಗಿ ತರಿಸಿದ ಪುಸ್ತಕಗಳ ವಿವರ:

1. ಕೊ—ಕೊಚ್ಚಿಯಿಂದ ಭುವನೇಂದ್ರ ಸ್ವಾಮಿಗಳ ಪುಸ್ತಕ . 90 ಅಧ್ಯಾಯ
2. ಜು—ಜುನ್ನರ ರಘುನಾಥ ಶರ್ಮ . . . . 100 ,,
3. ಸೊ—ರಾಯಲ ಏಸ್ಯಾಟಿಕ್ ಸೊಸ್ಯಾಟಿ
   1ನೇ ಭಾಗ 88, 2ನೇ ಭಾಗ 32 ಒಟ್ಟು . 120 ,,
4. ಸೊ—ಅದೇ ಸೊಸ್ಯಾಟಿಯ ಗುಜರಾಥಿಯಿಂದ ಬಂದದ್ದು . ,, ,,
5. ಕೊ—ದಕ್ಷಿಣ ಕನ್ನಡ ಜಿಲ್ಲಾ ಕೋಟದಿಂದ . . . 111 ,,
6. ಸಿ—ಸಿದ್ದಾಪುರ ದಕ್ಷಿಣ ಕನ್ನಡ ಜಿಲ್ಲಾ . . . ,, ,,
7. ಚೆ—ಚೆಂಪಿಯಿಂದ ದಕ್ಷಿಣ ಕನ್ನಡ ಜಿಲ್ಲಾ . . . ,, ,,
8. ಗೊ—ಗೋವೆಯಿಂದ 2 ಭಾಗ . . . . 108 ,,
9. ಕಾ—ಕಾಶಿಯಿಂದ . . . . . . . . 100 ,,
10. ಮುಂ—ಮುಂಬಯಿಯಲ್ಲಿ ಕೆಲವು ದೊಡ್ಡ ಮನುಷ್ಯರಿಂದ 4-5 ಪ್ರತಿಗಳು ಕ. ಖ. ಗ. ಘ. ಎಂದು ಗುರುತಿಸಲ್ಪಟ್ಟವು.

ಹೀಗೆ ತರಿಸಲ್ಪಟ್ಟ 14 ಪ್ರತಿಗಳ ಪೈಕಿ ತುಳುವ-ಶೀವಳ್ಳಿಯವರ ಪುಸ್ತಕ ಯಾವದೊಂದೂ ಇರುವುದಿಲ್ಲ. ಮೇಲೆ ನಮೂದಿಸಲಾದ 14 ಪ್ರತಿಗಳನ್ನು ಶೀವಳ್ಳಿಯವರೇ ಬರೆದು ಜಗತ್ತಿಗೆ ಪೂರೈಸಿದರು ಎಂತ ಹೇಳಲು ಸಾಧ್ಯವಿದೆಯೇ? ಅಂದ ಮೇಲೆ ಛಾಪಾ ಆದ ಪುಸ್ತಕದ ಮಜಕೂರು ಶೀವಳ್ಳಿಯವರ ಸಂಪರ್ಕಹೊಂದಿರುವುದಿಲ್ಲ ಅಂದರೆ ಆ ವಿಷಯಗಳಿಗೆ ಶೀವಳ್ಳಿಯವರ ಜವಾಬ್ದಾರಿ ಸರ್ವಥಾ ಇರುವುದಿಲ್ಲ. ಇವನ್ನು ಶ್ರೀ ಗುರುರಾಜ ಭಟ್ಟರು ಚೆನ್ನಾಗಿ ಅರಿತುಕೊಳ್ಳಬೇಕು. ಥರ್ಸನ್ ಕುನ್ಹಾ ಅವರು ಸಂಶೋಧಿಸಿ ಛಾಪಿಸಿದ ಪುಸ್ತಕದಲ್ಲಿ ಸಹ ಮಯೂರವರ್ಮ ರಾಜನು ಗೋದಾವರೀ ತೀರದ ಅಹಿಚ್ಛತ್ರ. ಅಲ್ಲಿಂದ ಒಂದೇ ಸರ್ತಿ ಹವೀಕ, ಕೋಟ, ಶೀವಳ್ಳಿಯವರನ್ನು ಕರೆತರಿಸಿ ನೆಲೆಸಿದ್ದು. ಅನಂತರ ಒಂದು ದಾಸಿಯಲ್ಲಿ ಬ್ರಾಹ್ಮಣನಿಂದ ಪಾಟಾಳಿಗಳ ಉತ್ಪತ್ತಿ. ಶಿವಾಲಯಾದಿಗಳಲ್ಲಿ ದೇವರ ನೈವೇದ್ಯಭೋಜನ, ಗೋಮಯ ಲೇಪನ, ಛತ್ರವೇತ್ರಧಾರಣ ಮೊದಲಾದ ದೇವಕಾರಿ ಕೆಲಸದ ಅನುಶಾಸನ. ಚಿತ್ಪಾವನನಿಂದಾ, ಕರ್‍ಹಾಡ ಬ್ರಾಹ್ಮಣನಿಂದಾ, ಮೊದಲಾದ ಗುರುರಾಜ ಭಟ್ಟರೀಗೆ ಅಪಥ್ಯಕರವೆಂದು ಭಾಸವಾದ ವಿಷಯಗಳು ಉಕ್ತವಾಗಿವೆ. ಈ ಪರಶುರಾಮ ಕ್ಷೇತ್ರದಲ್ಲಿ ಉತ್ತರದಿಂದ ದಕ್ಷಿಣದ ತುದಿಯ ವರೇಗಿನ ನಿವಾಸಿಗಳೆಂದರೆ:—1. ಚಿತ್ಪಾವನ ಕರಾಡೆ, 2. ಗೌಡ ಸಾರಸ್ವತರು, ಸಾರಸ್ವತರು, 3. ಹವೀಕ, ಕೋಟ, ಕೋಟೇಶ್ವರ, ಶೀವಳ್ಳಿಯವರು, 4. ಸ್ಥಾನಿಕರು, 5. ಬೆಳ್ಳಂಜ ಪಂಚಗ್ರಾಮ, ಸಕಲಪುರಿ ಮೊದಲಾದವರು, 6. ನಂಬೂದ್ರಿಗಳು. ಹೀಗೆ ಇರುತ್ತಾರೆ. ಇವರ ಪೈಕಿ ಯಾರೇ ಆಗಲಿ ಸಹ್ಯಾದ್ರಿ ಉತ್ತರಖಂಡ ಬರೆದರೆಂಬುವದನ್ನು ಒಪ್ಪಿಕೊಳ್ಳಲು ಶಕ್ಯವಾಗಲಾರದು.

1. ಚಿತ್ಪಾವನರ ಕುರಿತು ಮೊದಲನೇ ಅಧ್ಯಾಯದಲ್ಲಿ ಇವರು ಕೈವರ್ತರು, ವ್ಯಾಧ ಧರ್ಮವಿಶಾರದರು. ನಂತರ ಪರಶುರಾಮನಿಂದ ಬ್ರಾಹ್ಮಣ್ಯ ಪಡೆದರೂ ಕುಚೋದ್ಯತನಮಾಡಿ ಶಾಪವನ್ನೂ ಪಡೆದು ನಿಂದಿತರಾದರು. ಇತ್ಯಾದಿ ಅವರ ಕುರಿತು ತೆಗಳಿಕೆ ಇದೆ.

2. "ತ್ರಿಹೋತ್ರಾಃ ಕಾನ್ಯಕುಬ್ಜಾಶ್ಚ ಮತ್ಸ್ಯ ಭುಕ್ ಮಾಂಸಭೋಜಿನಃ" ಎಂಬದಾಗಿಯೂ, "ಇತಿ ಕೊಂಕಣಜಾ ವಿಪ್ರಾ ದುಷ್ಟದೇಶೇ ಸುಮುದ್ಭವಾಃ || ಕುಚೈಲಾಚಾರ ಹೀನಾಸ್ತೆ ಸರ್ವಕಾರ್ಯೇಷುವರ್ಜಯೇತ್" ಎಂಬದಾಗಿಯೂ ನಿಂದಿಸಲ್ಪಟ್ಟ ಗೌಡ ಸಾರಸ್ವತರು ವ ಸಾರಸ್ವತರು ತಮ್ಮನ್ನು ತಾವೇ ದೂಷಿಸುವಂಥಾ ಗ್ರಂಥಕರ್ತರೆನ್ನಬಹುದೇ?

3. ಕನ್ನಡಭಾಷೆಯನ್ನಾಡುವ ಹವೀಕ, ಕೋಟದವರನ್ನು ಕುರಿತು "ಕರ್ಣಾಟಾಶ್ಚೈವದುರ್ಜನಾಃ" ಎಂಬದಾಗಿ ತೆಗಳಿಕೆ ಇದೆ. ಕೋಟೇಶ್ವರ, ಪಂಚಗ್ರಾಮ, ಬೆಳ್ಳಂಜ, ಸಕರಪುರಿ, ಮೊದಲಾದವರ ಕುರಿತು ಅಧ್ಯಾಯ ಅಧ್ಯಾಯಗಳಲ್ಲಿ ನಿಂದೆ ಕಂಡುಬರುತ್ತದೆ. ನಂಬೂದ್ರಿಯವರ ಪುಸ್ತಕ ಡಾ|| ಕುನ್ಹಾರವರ ಕಡೆ ಬರಲೇ ಇಲ್ಲ.

ಕೊಚ್ಚೀ ಪುಸ್ತಕವು ಗೌಡಸಾರಸ್ವತರ ಪೈಕಿ ಭುವನೇಂದ್ರ ಸ್ವಾಮಿಗಳ ಪುಸ್ತಕವೆಂದು ಬರೆಯಲ್ಪಟ್ಟಿದೆ. ಶೀವಳ್ಳಿಯವರ ಪುಸ್ತಕವು ಡಾ| ಕುನ್ಹಾರವರ ಕಡೆ ಸಂಶೋಧನೆ ಯಲ್ಲಿರಲಿಲ್ಲ. ಅಂದಮೇಲೆ ಒಂದುವೇಳೆ ಸಹ್ಯಾದ್ರಿ ಉತ್ತರಖಂಡ ಕೃತಕವೆಂದು ಕೊಂಡರೂ ಬಹುಕಾಲದ ಹಿಂದೆ ಸ್ವಾರ್ಥವಿದೂರರಾದ ಗುಣದೋಷ ವಿಚಾರನಿರತ ರಾದ ತ್ರಯಸ್ಥರು ಮಾಡಿರಬಹುದೆಂದು ಕಲ್ಪಿಸಬೇಕಲ್ಲದೆ ಶೀವಳ್ಳಿಯವರು ಕಲ್ಪಿಸಿದ ರೆನ್ನುವುದು ಸರಿಯಲ್ಲ.

1ನೇ ಅಧ್ಯಾಯದಲ್ಲಿ ಚಿತ್ತಪಾವನರ ಕುರಿತು ಬರೆದದೆ. 54 ಶ್ಲೋಕಗಳು ಇವೆ.

2ನೇ ಅಧ್ಯಾಯದಲ್ಲಿ ಕರ್ಹಾಡ ಬ್ರಾಹ್ಮಣರ ಕುರಿತು ಬರೆದದೆ. 32 ಶ್ಲೋಕ.

3. ಗೋಮಾಂಚಲಮಾಹಾತ್ಮ್ಯೆ ಗೌಡಸಾರಸ್ವತರ ಕುಲದೇವತೆಗಳು ಗೋ- ವೆಯ ತೀರ್ಥಕ್ಷೇತ್ರಗಳು. 35 ಶ್ಲೋಕಗಳು.

4. ವಿವಿಧ ಬ್ರಾಹ್ಮಣ ಉತ್ಪತ್ತಿ ಎಂಬ ಶಿರೋನಾಮದ ಕೆಳಗೆ ಸಂಕರಜಾತಿ ಗಳನ್ನು ಉಲ್ಲೇಖಿಸಿ ಇವೆಲ್ಲಾ ಕೊಂಕಣದ ವಿಪ್ರ ಜಾತಿಗಳೆಂದು ಉಕ್ತವಾಗಿದೆ.

5. ಬ್ರಾಹ್ಮಣರ ಆಚಾರ ವಿಚಾರ ಉಕ್ತವಾಗಿದೆ. 92 ಶ್ಲೋಕ.

6. ಬಲಿರಾಜನಿಂದ ಅಪಹೃತವಾದ ಭೂಮಿಯನ್ನು ಕಶ್ಯಪಂಗೆ ಕೊಟ್ಟದ್ದಾ ಗಿಯೂ, ಅದನ್ನು ಕಶ್ಯಪರು ಇತರ ಬ್ರಾಹ್ಮಣರೊಡಗೂಡಿ ಅನುಭವಿಸಿಕೊಂಡು ಬರು ವಾಗ್ಗೆ ತ್ರೇತಾಯುಗದಲ್ಲಿ ದುಷ್ಟ ದೈತ್ಯರು ಅಪಹರಿಸಿದ್ದಾಗಿಯೂ, ಆಗ ಪರಶು ರಾಮನು ದುಷ್ಟಕ್ಷತ್ರಿಯ ಸಂಹಾರಪೂರ್ವಕ ತಾನು ಪಡೆದ ಭೂಮಿಯನ್ನು ಮರಳಿ ಬ್ರಾಹ್ಮಣರಿಗೆ ಕೊಟ್ಟದ್ದಾಗಿಯೂ, ತದನಂತರ ಪಶ್ಚಿಮ ಕರಾವಳಿಯಲ್ಲಿ ಸಮುದ್ರದಿಂದ ಭೂಮಿಯನ್ನು ಪಡೆದು ಬ್ರಾಹ್ಮಣರಿಂದ ಸಹಿತನಾಗಿ ತಾನು ವಾಸಮಾಡುತ್ತಿದ ಕಥೆ ಉಕ್ತವಾಗಿದೆ. ರಾವಣನಿಂದ ಅಪಹೃತ ಶಿವಲಿಂಗವನ್ನು ಗಣಪತಿ ಗೋಕರ್ಣದಲ್ಲಿ ಸ್ಥಾಪಿಸಿದ ಕಥೆ ಸಹ ಉಕ್ತವಾಗಿದೆ.

7. ಪರಶುರಾಮನು ಕೈವರ್ತರನ್ನು ಬ್ರಾಹ್ಮಣರನ್ನಾಗಿ ಮಾಡಿ ಅಗ್ರಹಾರ ಗ್ರಾಮಗಳನ್ನು ಕೊಟ್ಟು ಕೂಡಿಸಿದ್ದಾಗಿಯೂ, ಅವರು ಕ್ರಮೇಣ ವಿದ್ಯಾಕರ್ಮಗಳನ್ನು ಬಿಟ್ಟು ಶೂದ್ರಪ್ರಾಯರಾದ ಬಳಿಕ ಮಯೂರವರ್ಮನು ಅಹಿಚ್ಛತ್ರದಿಂದ ಬ್ರಾಹ್ಮಣ ರನ್ನು ಕರೆತರಿಸಿ ನಿಲ್ಲಿಸಿದ ಸಮಾಚಾರವಿದೆ.

8. 32 ಗ್ರಾಮಗಳ ವ್ಯವಸ್ಥೆಮಾಡಿದ್ದು ಉಕ್ತವಾಗಿ, ತಿರುಗಿಹೋದ ಬ್ರಾಹ್ಮಣ ರನ್ನು ಚಂದ್ರಾಂಗದನು ಪುನಶ್ಚ ತರಿಸಿ ಕೂಡಿಸಿದ ಕಥೆ ಉಕ್ತವಾಗಿದೆ.

9. 10. ಪಂಚಗ್ರಾಮದವರ ಕಥೆ.

11. ಒಬ್ಬ ಶೂದ್ರನ ನವೊಢಾ ಹೆಂಗಸಿನ ಸಂಬಂಧದಿಂದ ಪತಿತ ಬ್ರಾಹ್ಮಣರ ಕಥೆ ಉಕ್ತವಾಗಿದೆ.

12. ಕೋಟೀಶ್ವರದವರ ಗಡಿ ವಿವಾದದ ಕಥೆ.

13. ಸಕಲಪುರಿಯವರ ಚರಿತ್ರೆ ಉಕ್ತವಾಗಿದೆ.

14. ಕಿರಾತಕನ್ಯಾ ಅಡಗಿಸಿಟ್ಟು ವಿವಾಹವಾಗಿ ಪತಿತರ ಮತ್ತು ಅವರ ಸಂಸರ್ಗ ದಿಂದ ಪತಿತರ ಕಥೆ.

15. ಶಾಪಗ್ರಸ್ತ ಬ್ರಾಹ್ಮಣರ ಕಥೆ.

16. 17. ಬೆಳ್ಳಂಜಿಯವರ ಕಥೆ.

18. 19. ಸ್ಥಾನಿಕರ ಕಥೆ.

20. 21. ತೀರ್ಥಕ್ಷೇತ್ರ ಮಾಹಾತ್ಮ್ಯ ಬ್ರಾಹ್ಮಣ ವೈವಿಧ್ಯ ಉಕ್ತವಾಗಿದೆ.

ಮುದ್ರಿತ ಸಹ್ಯಾದ್ರಿಖಂಡದ ವಿಷಯಾನುಕ್ರಮಣಿಕಾ ಮುಗಿಯಿತು.

ಇನ್ನು 18. 19. ಅಧ್ಯಾಯದ ಸ್ಥಾನಿಕರ ಉತ್ಪತ್ತಿಕಥಾ ಸ್ವಲ್ಪ ವಿವರಿಸ ಲಾಗುತ್ತದೆ. ಅದು ಪ್ರಕೃತ ಉಪಯುಕ್ತ ಸಹ ಆಗಿದೆ. ಮುದ್ರಿಸಿದ, ಶೀವಳ್ಳಿಯವರ ಸಂಪರ್ಕವಿಲ್ಲದ, ಸಹ್ಯಾದ್ರಿ ಉತ್ತರಖಂಡದಲ್ಲಿ 18, 19 ಅಧ್ಯಾಯಗಳಲ್ಲಿ ಬರೆದು ಪ್ರಕಟಿಸಿರುವ ಸ್ಥಾನಿಕರ ಉತ್ಪತ್ತಿ. ಹೇಮಮಾಲಿನಿಯೆಂಬ ಗೋರಾಷ್ಟ್ರದ ರಾಜನ ಸಭೆಗೆ ವೇದವೇದಾಂಗಪಾರಂಗತನಾದ ತಪಸ್ವಿ ಮತ್ತು ಪಂಡಿತ ಬ್ರಾಹ್ಮಣನೊಬ್ಬನು ಸುಮತಿಯೆಂಬ ತನ್ನ ಪತ್ನಿ(ಯಿಂದ) ಸಹಿತನಾಗಿ ಬಂದನು. ಆತನ ಹೆಸರನ್ನು ಒಂದು ಶ್ಲೋಕದಲ್ಲಿ ಹೇಳಲಾಗಿದೆ. ಅದರ ಅರ್ಥವಾಗುವುದಿಲ್ಲ. ಪ್ರತಿಭಾಶಾಲಿಗಳು ಅರ್ಥ ಮಾಡಿ ತಿಳಿಸಬೇಕೆಂದು ಶ್ಲೋಕವನ್ನು ಕೆಳಗೆ ಕೊಡಲಾಗಿದೆ.

"ಅಗ್ರಜಸ್ಯಾನುರೋಧೋಯತ್ ತದ್ವಾಕ್ಯಂ ಪ್ರಾಕೃತೆ ಪದೆ
ಪ್ರಾಗುಕ್ತಾತ್ ತಾರಕಾತ್ ಶಬ್ದಾತ್ ಪರಶಬ್ದ ಸನಾಮವಾನ್ ||" ಎಂದಿದೆ.

ಆತನು ರಾಜನಿಗೆ ಎಡಗೈಯಿಂದ ಮಂತ್ರಾಕ್ಷತವನ್ನು ಕೊಟ್ಟದ್ದರಿಂದ ರಾಜನಿಗೆ ಅಸ ಮಾಧಾನವಾಗಲು ಆಗ ಬ್ರಾಹ್ಮಣನು ಬಲಗೈಯಿಂದ ಮಂತ್ರಾಕ್ಷತ ಕೊಡಲು ನನಗೆ ಏನೂ ಅಭ್ಯಂತರವಿರುವುದಿಲ್ಲ. ನಿನಗೆ ತೆಗೆದುಕೊಳ್ಳಲು ಶಕ್ತಿ ಇದೆಯೋ ನೋಡಿಕೊಳ್ಳು ಎಂದು ಹೇಳಿ ಬಲಗೈಯಿಂದ ಮಂತ್ರಾಕ್ಷತೆ ಕೊಟ್ಟನು. ಆಗ ಅಗ್ನಿ ಯಿಂದ ಉರಿಯತೊಡಗಿತು. ರಾಜನು ಆತನ ತಪಸ್ಸಿಗೆ ಮೆಚ್ಚಿ ಆತನ ಅನುಗ್ರಹಾ ರ್ಥವಾಗಿ 8 ಗ್ರಾಮಗಳನ್ನೂ, ಅನೇಕ ದಾಸ ದಾಸಿಯರನ್ನೂ ಕೊಟ್ಟು ಗೌರವಿಸಿ ಕಳುಹಿಸಿದನು. ಸದರಿ ಬ್ರಾಹ್ಮಣನು ಆ ದಾಸಿಯರ ಪೈಕಿ ಒಬ್ಬಳಲ್ಲಿ ಮೋಹಿತನಾಗಿ ಕೆಲಕಾಲ ಆಕೆಯ ಸಂಬಂಧ ಇಟ್ಟುಕೊಂಡು 8 ಗಂಡು ಮಕ್ಕಳನ್ನು ಪಡೆದನು. ಆ ಮೇಲೆ ತನ್ನ ತಾಮಸೀ ಪ್ರವೃತ್ತಿಯಿಂದ ನೊಂದುಕೊಂಡು ತಪಸ್ಸಿಗೆ ಹೊರಡುತ್ತಾ ತನ್ನ ಔರಸ ಬ್ರಾಹ್ಮಣ ಹೆಂಡತಿ ಸುಮತಿಯ ಮಗನನ್ನು ಕರೆದು ರಾಜನಿಂದ ಪ್ರಾಪ್ತ ವಾದ 8 ಗ್ರಾಮಗಳನ್ನು ಮೋಹದ ಮಕ್ಕಳಿಗೆ ಕೊಟ್ಟಿರುತ್ತೇನೆ. ಅವರನ್ನು ಒಳ್ಳೆಯ

ರೀತಿಯಿಂದ ನಡೆಯಿಸಿಕೊಂಡು ಬರಬೇಕು ಎಂತ ತಾಕೀತುಮಾಡಿದನು. ಹಾಗೂ ದಾಸೀಪುತ್ರರಿಗೆ 8 ಗ್ರಾಮಗಳನ್ನು ಕೊಟ್ಟು ಈ ರೀತಿ ಶಾಸನಮಾಡಿರುತ್ತಾನೆ. ಷಟ್‌ಕರ್ಮ, ಷಟ್‌ಪುಚ್ಛ, 2 ಜನಿವಾರ, ಸ್ವಪಂಕ್ತಿ ಭೋಜನ, ಶಾಸ್ತ್ರ-ಪುರಾಣ ಪಠನ, ಇವೆಲ್ಲಾ ಮಾಡಕೂಡದು. ದೇವಸ್ಥಾನಗಳಲ್ಲಿ ಸತ್ತಿಗೆ, ಕಟ್ಟಕೋಲು ಹಿಡಿಯ ಬೇಕು. ಎಂಜಲು, ಮುಸುರೆ ತೆಗೆಯಬೇಕು. ಗೋಮಯ ಲೇಪನ ಮಾಡಬೇಕು. ಬ್ರಾಹ್ಮಣರ ಪಂಕ್ತಿಯಲ್ಲಿ ಊಟಕ್ಕೆ ಕೂಡಬಾರದು. ಹೀಗೆ ನಿಮಗೆ ನನ್ನ ಆಜ್ಞೆ ಇರುತ್ತದೆ. ಹೀಗೆ ಅವರನ್ನು ಕುರಿತು ಶಾಸನ ಮಾಡಿ ತಪಸ್ಸಿಗೆ ಹೋದನು. ಅನಂತರ ಹಿರೇ ಮಗನು ಅವರಿಗೆ ಅನುಲೋಮ ಜಾತಿಯಾದ್ದರಿಂದ ಚೌಲೋಪನಯನ ಮಾಡಿಸಿ ದನು. ಮುಂದೆ ಇತರ ದಾಸಿಯರ ಕನ್ನೆಯರ ಸಂಗಡ ವಿವಾಹ ಮಾಡಿಸಿದನು ಎಂದು ಬರೆಯಲಾಗಿದೆ. ಆವಶ್ಯಕ ಕೆಲ ಶ್ಲೋಕಗಳನ್ನು ಕೆಳಗೆ ಕೊಟ್ಟಿರುತ್ತದೆ. ಈ ಅಧ್ಯಾಯದಲ್ಲಿ ಸ್ಥಾನಿಕರೆಂಬ ಶಬ್ದವಿಲ್ಲದಿದ್ದರೂ ಅದರಲ್ಲಿ ಹೇಳುವ ಅರ್ಥಕ್ಕೂ, ಸ್ಥಾನಿಕರು ದೇವಾಲಯಗಳಲ್ಲಿ ಮಾಡುವ ಕೆಲಸಕ್ಕೂ ಐಕ್ಯಮತ್ಯವಿರುವುದರಿಂದ ಸ್ಥಾನಿ ಕರೆಂದು ತೀರ್ಮಾನಿಸಬಹುದಾಗಿದೆ. ತಳಿಗೆ ಕಲ್ಲು ನೈವೇದ್ಯ, ಸತ್ತಿಗೆ, ಕಟ್ಟಗೆಕೋಲು ಚಾಮರ ಹಿಡಿಯುವುದು, ಬ್ರಾಹ್ಮಣ ಭೋಜನೋತ್ತರ ಗೋಮಯ ಲೇಪನ ಇವ ನ್ನೆಲ್ಲಾ ಮಾಡುತ್ತಿರುವುದು ಕಾಣುತ್ತೇವೆ. ಈ ಅಧ್ಯಾಯದಲ್ಲಿ ಹೇಳಿದ ಕಥೆಯಲ್ಲಿ ಉಕ್ತವಾದ ಬ್ರಾಹ್ಮಣನ ತಪಸ್ಸು, ರಾಜನು ಮಾಡಿದ ಗೌರವ, ಬ್ರಾಹ್ಮಣನ ವ್ಯಾಮೋಹ, ಇದು ಯಾವುದೂ ಸ್ವೀಕಾರಾನರ್ಹ ಎಂಬಂತಿಲ್ಲ. ಬ್ರಾಹ್ಮಣನಿಂದ ದಾಸಿ ಯಲ್ಲಿ ಹುಟ್ಟಿದ ಮಕ್ಕಳನ್ನು ಬ್ರಾಹ್ಮಣರಂತೆ ನಡೆಯಿಸಿಕೊಂಡು ಬರಬೇಕೆಂಬುದೂ ಉಚಿತವಲ್ಲ. ಆದುದರಿಂದ ನಿಷ್ಪಕ್ಷಪಾತದೃಷ್ಟಿಯಿಂದ ನೋಡುವವರಿಗೆ ಈ ಅಧ್ಯಾಯ ಗಳು ಆಕ್ಷೇಪಾರ್ಹವಾಗಿಲ್ಲವೆಂದು ತಿಳಿಯಬಹುದು. ಕೆಲ ಶ್ಲೋಕಗಳು.

"ಪುತ್ರೇಭ್ಯಃ ಸ್ನೇಹಯುಕ್ತೇಭ್ಯಃ ದದೌ ಗ್ರಾಮಾನ್ ಅನುಕ್ರಮಾತ್ ।
ಏಕಸ್ಯೈಕಂ ಅಥಾಜ್ಞಾಪ್ಯ ಶಿಕ್ಷಾಮಿತ್ಥಂ ಚಕಾರ ಸಃ ॥

ಯತ್ರ ಯತ್ರ ಶಿವಾಗಾರೇ ತತ್ರ ತತ್ರ ಮಯಾಜ್ಞಯಾ ।
ಶಿವನಿರ್ಮಾಲ್ಯ ಭೋಕ್ತಾರಃ ಛತ್ರವೇತ್ರಾದಿ ಧಾರಕಾಃ ॥

ಸಮ್ಮಾರ್ಜನಾದಿಕಂ ಕೃತ್ವಾ ತಥಾ ಗೋಮಯಲೇಪನಂ ।
ಅಪಾಂಕ್ತೇಯಾಃ ವಿಪ್ರಸಂಘೇ ಸಂಚರಂತು ಮಮಾಜ್ಞಯಾ ॥

ಚೌಲೋಪನೀತಿಕರ್ಮಾಣಿ ಕಾರಯಾಮಾಸ ಶಾಸ್ತ್ರತಃ ।
ಇತರಾಸಾಂಚ ಚೇಟೀನಾಂ ಸಂಜಾತಾನಾಂ ನೃಪಾತ್ಮಜ ॥

ವಿವಾಹಮಷ್ಟಕನ್ಯಾನಾಂ ಕಾರಯಾಮಾಸ ತಾನ್ ಪ್ರತಿ ।
ಕರ್ಮಷಟ್ಕಂ ಚ ಷಟ್ಪುಚ್ಛಂ ಉಪವೀತದ್ವಯಂ ತಥಾ ॥

ಸಹಂಸ್ತ್ರಿಣೀಜನಂ ಚೈವ ಪುರಾಣಪಠನಂ ತಥಾ |
ಮ್ಲೇಚ್ಛಸಂಘಪ್ರವೇಶಂ ಚ ನೇಚ್ಛ್ಯಾದ ಭಗವಾನ್ ಗುರುಃ ||" ಗುರು—ತಂದೆ.

## ಅವತರಣಿಕಾ

ನಕ್ಸಲಬಾರಿ ಟೈಪಿನ ಗುಂಡಾ ಜನರಿಗೆ ಪೋಲೀಸ್ ಖಾತೆ, ಮೆಜಿಸ್ಟ್ರೇಟ್ ಕೋರ್ಟು, ಜೈಲು, ಇಂಡಿಯನ್ ಪಿನಲ್‌ಕೋಡು ಇತ್ಯಾದಿ ಇರಬಾರದೆಂಬ ಅಪೇಕ್ಷೆ. ಅದರಂತೆ ಯಾರು ಪತಿತರು ಮತ್ತು ಬ್ರಾತ್ಯರು, ಧರ್ಮಬಾಹಿರರು, ಅವರಿಗೆ ಧರ್ಮ, ಧರ್ಮಶಾಸ್ತ್ರ, ಧಾರ್ಮಿಕ ಜನರು ದ್ವೇಷಪಾತ್ರರು. ಧರ್ಮಭ್ರಷ್ಟರು ಮತ್ತು ಅವರನ್ನು ಎತ್ತಿ ಹಿಡಿಯುವ ಜನರು ಸಾಧ್ಯವಿದ್ದಮಟ್ಟಿಗೆ ಧರ್ಮ, ಧರ್ಮಶಾಸ್ತ್ರಗಳು, ಧಾರ್ಮಿಕ ಜನರು ಇವರನ್ನು ತೆಗಳುತ್ತಾರೆ, ಖಂಡಿಸುತ್ತಾರೆ ಮತ್ತು ಅಪಪ್ರಚಾರ ಮಾಡುತ್ತಾರೆ. ತಮ್ಮ ಯಾವತ್ತೂ ಪ್ರಯತ್ನವನ್ನು ಧರ್ಮಶಾಸ್ತ್ರ ಹಾಗೂ ವೈದಿಕರ ವಿರುದ್ಧ ಕೇಂದ್ರೀಕರಿಸುತ್ತಾರೆ. ಇದು ಅವರ ಸ್ವಭಾವಧರ್ಮ. ಈ ತರದ ತಾಮಸೀ ಪ್ರವೃತ್ತಿ ಮೊದಲಿನಿಂದಲೂ ಇರುತ್ತಿದ್ದು ಇಂಥವರಿಗೆ ಇಂಗ್ಲೀಷರು ಬಂದಮೇಲೆ ಮಾರ್ಗ ಸುಗಮವಾಯಿತು. ಅದಕ್ಕಿಂತ ಪೂರ್ವದಲ್ಲಿ ಸಮರ್ಥ ಧರ್ಮಶಾಸಕ ಹಿಂದೂ ರಾಜರಿಂದ ಇವರ ಚಟುವಟಿಕೆಗಳು ತಡೆಹಿಡಿಯಲ್ಪಡುತ್ತಿದ್ದ ಕಾರಣ ಇಂಥವರ ಆಟ ನಡೆಯುತ್ತಿದ್ದಿಲ್ಲ. ಪುರಾತನ ಕಾಲದಿಂದಲೂ ಇಂಥಾ ಉನ್ಮಾರ್ಗೀ ಕಮ್ಯುನಿಷ್ಠಿಯ ಜನರನ್ನು ದಸ್ಯುಗಳೆಂದು ಕರೆಯುತ್ತಿದ್ದರು. ಇಂಗ್ಲೀಷರು ಈ ನಮ್ಮ ನಾಡಿಗೆ ಬಂದು ರಾಜ್ಯಭಾರ ನಡೆಸುವಾಗ ಸ್ವತಃ ಅವರು ಸ್ವಮತ ಪ್ರಚಾರದೃಷ್ಟಿಯಿಂದಲೂ, ರಾಜಕಾರಣ ದೃಷ್ಟಿಯಿಂದಲೂ ಭಾರತದ ಬ್ರಾಹ್ಮಣ ಮುಖಂಡತ್ವವನ್ನು ಅಳಿಸಬೇಕೆಂದು ಇತಿಹಾಸ ಭೂಗೋಲ ಸಂಶೋಧನೆಯ ನೆವಮಾಡಿ ನಮ್ಮ ಶಾಸ್ತ್ರಗಳನ್ನು ಹೊಕ್ಕು ಅದರಲ್ಲಿರುವ ವಿಷಯಗಳನ್ನು ಸರಿಯಾಗಿ ತಿಳಿದುಕೊಳ್ಳದೇ ಅಸಂಬದ್ಧ ಅರ್ಥಗಳನ್ನು ಕಲ್ಪಿಸಿ ಧರ್ಮ ಮತ್ತು ಧಾರ್ಮಿಕರನ್ನು ಮನಸಾರೆ ತೆಗಳಿ ಗ್ರಂಥಗಳನ್ನು ಬರೆದರು. ಅದನ್ನು ಅಭ್ಯಾಸ ಮಾಡಿಸಲು ಶಾಲೆ ಕಾಲೇಜುಗಳನ್ನು ತೆರೆದರು. ಭಾರತೀಯ ಸಂಸ್ಕೃತಿ, ಭಾರತೀಯ ಶಾಸ್ತ್ರ, ಭಾರತೀಯ ಧರ್ಮ ಇವುಗಳನ್ನು ನಿಂದಿಸುವ ಹಾಗೂ ಅನಾದರ ಹುಟ್ಟಿಸುವ ಶಿಕ್ಷಣವನ್ನು ಕೊಟ್ಟು ಸುಶಿಕ್ಷಿತ ಸುಧಾರಕ ವರ್ಗವನ್ನು ತಯಾರಿಸಿದರು. ಕೈತುಂಬ ಹಣಕೊಟ್ಟು ಸಮಾಜದಲ್ಲಿ ಪ್ರತಿಷ್ಠಿತ ವ್ಯಕ್ತಿಗಳನ್ನಾಗಿ ಮಾಡಿದರು. ಅಂದಮೇಲೆ ಕೇಳುವುದೇನು? "ಮರ್ಕಟಸ್ಯ ಸುರಾಪಾನಂ ಮಧ್ಯೇ ವೃಶ್ಚಿಕದಂಶನಂ | ತನ್ಮಧ್ಯೇ ಭೂತಸಂಚಾರಃ ಯದ್ವಾ ತದ್ವಾ ಭವಿಷ್ಯತಿ ||" ಎಂಬಂತೆ ನಡೆದಿದೆ.

## ವಿಷಯ ಪ್ರವೇಶ

ಶ್ರೀ ಡಾ| ಸಾಲೆತ್ತೂರ, *M. A., Phd.,* ಲಂಡನ್ ಹಿಸ್ಟರಿ ಪ್ರೊಫೆಸರರು, ಶ್ರೀ ಪರಶುರಾಮ ಭಾವ ಕಾಲೇಜು, ಪೂನಾ ಇವರು 1938ರಲ್ಲಿ ಮುಂಬಯಿ ವಿಶ್ವ

ವಿದ್ಯಾಲಯದ ಜರ್ನಲದಲ್ಲಿಯೂ 68 ಪುಟದ ಪುಸ್ತಕ ಪ್ರಕಟಿಸಿಯೂ ಸ್ಥಾನಿಕರೆಂಬ ಶಾಂತ ಜನತೆಯಲ್ಲಿ ಕ್ಷೋಭೆ ಉಂಟುಮಾಡಿದರು. ಇದರಿಂದ ಕೆಲವು ಉಸದ್ವ್ಯಾಪಿಗಳಿಗೆ ಉತ್ತೇಜನ ದೊರೆಯಿತು. ಇಂಥವರ ಪೈಕಿ ಶ್ರೀ ಐ. ಕೆ. ಶ್ರೀನಿವಾಸ ರಾವ್ ಎಂಬವರು "ಸ್ಥಾನಿಕ ಬ್ರಾಹ್ಮಣರು" ಎಂಬ ಪುಸ್ತಕ ಬರೆದರು. ಶೀವಳ್ಳಿಯವರು ತಮ್ಮ ಅಧಿಕಾರ ಗೌರವಗಳನ್ನು ಕಸಿದುಕೊಂಡರೆಂದು ಮುಂತಾಗಿ ಅನೇಕ ಅಸತ್ಯ ವಿಧಾನಗಳನ್ನು ಮಾಡತೊಡಗಿದರು. ವೈಯಕ್ತಿಕವಾಗಿ ಒಬ್ಬೊಬ್ಬರೊಳಗೆ ಉಂಟಾದ ಜಗಳವನ್ನು ಶೀವಳ್ಳಿ ಸ್ಥಾನಿಕ ಜಾತಿ ಪ್ರಯುಕ್ತವೆಂದು ಎತ್ತಿ ತೋರಿಸಹತ್ತಿದರು. ಸಾಸುವೆಕಾಳನ್ನು ಕುಂಬಳಕಾಯಿಯನ್ನಾಗಿ ಮಾಡಿದರು. ಶ್ರೀ M. V. ಶಾಸ್ತ್ರಿಯವರು ಶಿವಬ್ರಾಹ್ಮಣ ಪರಿಷತ್ತಿನ ಅಧ್ಯಕ್ಷಭಾಷಣದ ಮೂಲಕ ಕೌಟಿಲ್ಯನ ಅರ್ಥ ಶಾಸ್ತ್ರದಲ್ಲಿ ಮತ್ತು ಶಾಸನಗಳಲ್ಲಿ ತಮಗೆ ದೊಡ್ಡ ಮಹತೋಭಾರ ಅಧಿಕಾರ ಗೌರವಗಳು ಇರುತ್ತಿದ್ದವು ಎಂಬುದಾಗಿ ಪ್ರಲಾಪಿಸತೊಡಗಿದರು. ಅಂತೂ ಸ್ಥಾನಿಕ ಜನಸಮಾಜದಲ್ಲಿ ಚಳವಳಿ ಸುರು ಆಯಿತು. ದೇವಸ್ಥಾನಗಳಲ್ಲಿ ದೇವಕಾರೀ ಕೆಲಸವನ್ನು ಬಿಡಿಸಲಾಯಿತು. ಶೀವಳ್ಳಿಯವರ ದ್ವೇಷ ಮಾಡಬೇಕೆಂದು ನಿರ್ಧರಿಸಲಾಯಿತು. ಶ್ರೀ ಅಚ್ಯುತ ಶರ್ಮರು ಪುಸ್ತಕ ಬರೆದು ಆ ನಿರ್ಧಾರವನ್ನು ಜ್ಯಾರಿಗೆ ತರಲು ಪ್ರಾರಂಭಿಸಿದರು. ಅನೇಕ ಕಡೆ ಕೋರ್ಟು ಖಛೇರಿಗಳಲ್ಲಿ ದಾವಾ ನಡೆದು ಎಷ್ಟೋ ಜನ ಸ್ಥಾನಿಕರು ವೃತ್ತಿ ಕಳಕೊಂಡರು. ಮತ್ತು ಪಾದೂರು ಶ್ರೀ ಗುರುರಾಜ ಭಟ್ಟರು, *M. A., Phd.,* ಪ್ರಿನ್ಸಿಪಾಲ್, ಕಲ್ಯಾಣಪುರ ಕಾಲೇಜು, ಇವರು ಡಾ| ಸಾಲೆತ್ತೂರರವರ ವಾಕ್ಯಗಳನ್ನು ಆಧರಿಸಿ ತನ್ನ ತುಳುನಾಡು ಪುಸ್ತಕದಲ್ಲಿ ಕೆಲವು ಅಧ್ಯಾಯಗಳನ್ನು ಬೆಳೆಸಿದರು. ನಿಜವಾಗಿಯೂ ಸ್ಥಾನಿಕ ಜನರು ಈ ದೇಶದಲ್ಲಿ ಮೂಲತಃ ಬ್ರಾಹ್ಮಣರಾಗಿದ್ದರೆಂದು ಆಗ್ರಹಪೂರ್ವಕ ಸಿದ್ಧಾಂತಮಾಡಹತ್ತಿದರು. ಇವರ ಅನ್ಯಾದೃಶ ರಿಸರ್ಚ್‌ನಂತೆ ಶಿಲಾಶಾಸನ ಚಾರಿತ್ರಿಕ ದಾಖಲೆಗಳಲ್ಲಿ ತೋರತಕ್ಕ ಸ್ಥಾನ, ಸ್ಥಾನಪತಿ, ಸ್ಥಾನೇಶ, ಈ ಸಾಲಿನ ಸ್ಥಕಾರಾದಿಯಾಗಿ ಉಳ್ಳ ಶಬ್ದಗಳನ್ನೆಲ್ಲಾ ಸ್ಥಾನಿಕರಿಗೆ ದತ್ತಿ ಬಿಟ್ಟಂತಿದೆ.

## ಸಂಶೋಧನೆಯ ಉದ್ದೇಶ

ಈ ಸಂಶೋಧಕರಿಗೆ ಆದಿಗುರು ಮತ್ತು ಮೂಲಗುರುಗಳು ಎಂದರೆ ಇಂಗ್ಲೀಷ್ ವಿದ್ವಾಂಸರು. ಈ ಇಂಗ್ಲೀಷರ ಸಂಶೋಧನೆಯ ಮೂಲ ಉದ್ದೇಶ ಏನಿತ್ತು ಎಂಬುದನ್ನು "ಶ್ರೀ ಬಾಳಾಶಾಸ್ತ್ರಿ ಹರಿದಾಸ ನಾಗಪೂರ" ಎಂಬವರು "ಭಗವಾನ್ ಶ್ರೀಕೃಷ್ಣ" ಎಂಬ ಪುಸ್ತಕದ 16ನೇ ಪುಟದಲ್ಲಿ ಬರೆದು ತೋರಿಸುತ್ತಾರೆ. "ಭಾರತ ರಾಷ್ಟ್ರವು ಋಗ್ವೇದ ಕಾಲದಿಂದಲೂ ಪೂರ್ಣಾವಸ್ಥೆಯನ್ನು ಮುಟ್ಟಿರುವ ಸಂಸ್ಕೃತಿಯ ರಾಷ್ಟ್ರವಾದ್ದರಿಂದ ಅದರ ಇತಿಹಾಸವನ್ನು ನಿರೂಪಿಸುವಾಗ ಕ್ರಮಕ್ರಮವಾಗಿ ವಿಕಸಿತವಾಗುವ ಮಾನವ ಸಂಘದ ಇತಿಹಾಸದ ಕಲ್ಪನೆಯನ್ನು (ಡಾರ್ವಿನಥಿಯರಿಯನ್ನು) ಬಿಟ್ಟುಬಿಡಬೇಕಾಗುತ್ತದೆ. ನಮ್ಮ ದುರ್ದೈವದಿಂದ ನಮ್ಮ ದೇಶದ ಇತಿಹಾಸವನ್ನು ಪ್ರತಿಪಾದಿಸ

ಲಿಕ್ಕೆ ಪಾಶ್ಚಾತ್ಯ ಸಂಶೋಧಕರು ಮುಂದೆ ಬಂದರು. ಮತ್ತು ಅವರು ನಮ್ಮ ದೇಶದ ಆತ್ಮಾಭಿಮಾನ ನಷ್ಟಮಾಡುವ ಹೇತುವನ್ನು ಮನಸ್ಸಿನಲ್ಲಿಟ್ಟುಕೊಂಡೇ ಮುಂದುವರಿದರು.

1. ಮ್ಯಾಕ್ಸಮುಲ್ಲರಂಥಾ ಪಂಡಿತರೂ ಸಹ ತಮ್ಮ ಚಟುವಟಿಕೆಯ ಕುರಿತು ಸ್ಟೇಟ್ ಸೆಕ್ರೆಟರಿಗೆ ಪತ್ರಬರೆದು ಕಳುಹಿಸುವಾಗ ಭಾರತೀಯರಿಗೆ ತಮ್ಮ ಧರ್ಮ ವ ಸಂಸ್ಕೃತಿಗಳ ಮೇಲಿನ ಅಭಿಮಾನ ನಷ್ಟಮಾಡುವ ಬಾಬತ್ತಿನಲ್ಲಿ ನಾವು ಯಶಸ್ವಿಯಾದ ಕುರಿತು ಸಮಾಧಾನವ್ಯಕ್ತಪಡಿಸಿದ್ದಾರೆ. ಮತ್ತು ಮುಂದೆ 2ನೇ ಖಂಡದಲ್ಲಿ ಅವರು ಬರೆಯುತ್ತಾರೆ—"If Christianity does not step in whose fault will it be", "ಕ್ರಿಸ್ತಮತ ಭಾರತದಲ್ಲಿ ಪ್ರವೇಶಿಸದಿದ್ದರೆ ಅದರ ತಪ್ಪು ಯಾರದ್ದು" ಈ ರೀತಿ ಮ್ಯಾಕ್ಸಮುಲ್ಲ ಸಾಹೇಬರು ತನ್ನ ಆ ಹೇತುವನ್ನು ಸ್ಪಷ್ಟಮಾಡದೆ ಇರಲಿಲ್ಲ.

2. ಜಸ್ಟಿಸ್ ವುಡ್‌ಡ್ರಾಪ್ ಎಂಬವರು ಇತಿಹಾಸ ಸಂಶೋಧನೆಯ ಪರಿಣಾಮವೆಂದು "India has become ignorant of its racical spirit" ಅಂತಾ ಉದ್ಗಾರ ತೆಗೆದಿರುತ್ತಾರೆ. ಅವರ ಸಂಶೋಧನೆಯಲ್ಲಿ ರಾಜಕೀಯ ಉದ್ದೇಶವಿತ್ತು ಎಂಬುದು ಸ್ಪಷ್ಟವಿದೆ. ಅದರ ಮೇಲೆ ಆಧರಿಸಿದ ಶಿಕ್ಷಣತಂತ್ರದ ಸಂಸ್ಕಾರದಿಂದ ಯಾವ ಪೀಳಿಗೆ ಉಂಟಾಗುತ್ತದೋ ಅದು ಆತ್ಮವಿಸ್ಮೃತಿ ಪಡೆದ ಬಗ್ಗೆ ಆನಂದ ವ್ಯಕ್ತಪಡಿಸಿದ್ದಾರೆ.

3. "ಸರ್ ವ್ಹೆಲೆಂಟಾಯಿನ್ ಚಿರೋಲ್" ಎಂಬವರು ತಮ್ಮ ಆತ್ಮ ಸಮಾಧಾನ ವ್ಯಕ್ತಪಡಿಸುತ್ತಾ ಹೇಳುತ್ತಾರೆ—ಇಂಡಿಯಾದ ಮಧ್ಯಮವರ್ಗದವರನ್ನು ಅವರ ಧರ್ಮ ಸಂಸ್ಕೃತಿಯ ಮಟ್ಟಕ್ಕಿಂತ ಒಂದು ಫೂಟನಷ್ಟಾದರೂ. ಮೇಲಕ್ಕೆ ಎಳೆದು ಹಾಕಿ ಬಿಟ್ಟದ್ದೇವೆ ಎಂದು.

4. ಭಾರತದ ಇತಿಹಾಸ ಪರಿಷತ್ತಿನ 7ನೇ ಅಧಿವೇಶನದಲ್ಲಿ ಡಾ| ಮೌಲಾನಾ ನಾಡವೀಯವರು ಪಾಶ್ಚಾತ್ಯ ಪಂಡಿತರಲ್ಲಿ ಆಧಾರ ವಾಕ್ಯಗಳನ್ನು ಆರಿಸುವ ಮತ್ತು ಅದರ ಭಾಷಾಂತರ ಮಾಡುವ ಎರಡೂ ಬಾಬ್ತಿನಲ್ಲಿ ಪ್ರಾಮಾಣಿಕತನ ಇರುವುದಿಲ್ಲ ಎಂದು ಉದ್ಗಾರ ತೆಗೆದಿರುತ್ತಾರೆ.

5. ಇವರಿಗಿಂತ ಎಷ್ಟೋ ವರ್ಷಗಳ ಹಿಂದೆಯೇ ಸ್ವಾಮಿ ವಿವೇಕಾನಂದರು ಬರೆಯುತ್ತಾರೆ—"ನೀವು ಭಾರತೀಯ ಗ್ರಂಥಗಳ ಅರ್ಥ ಮಾಡುವಾಗ ಪಾಶ್ಚಾತ್ಯ ಪಂಡಿತರ ಕಡೆ ಸ್ವಲ್ಪವೂ ಲಕ್ಷ್ಯ ಕೊಡಬೇಡಿರಿ. ಪಾಶ್ಚಾತ್ಯ ಪಂಡಿತರಿಗೆ ನಮ್ಮ ಗ್ರಂಥಗಳೊಳಗಿನ ಒಂದಕ್ಷರವೂ ತಿಳಿಯುವುದಿಲ್ಲ. ಭಾಷಾಶಾಸ್ತ್ರದ ಶುಷ್ಕ ವಿಚಾರಗಳನ್ನು ಮುಂದುಮಾಡುತ್ತಿರುವ ಪಾಶ್ಚಾತ್ಯರಿಗೆ ತತ್ವಜ್ಞಾನ ಮತ್ತು ಧರ್ಮಗಳ ಅರಿವು ಆಗುವ ಸಂಭವವಿಲ್ಲ. ಋಷಿಮುನಿಗಳ ಪರಂಪರೆಗೆ ಅನುಸರಿಸಿ ಸಕಲ ವಿಷಯಗಳನ್ನೂ

ಅರಿತು ಕೊಳ್ಳಿರಿ. ಪಂಡಿತರೆಂದೆನಿಸಿಕೊಳ್ಳುವ ಪಾಶ್ಚಾತ್ಯ ಅಭ್ಯಾಸಕರ ಬೆನ್ನು ಹತ್ತ ಬೇಡಿರಿ.ಅವರಿಗೆ ಏನು ತಿಳಿಯುತ್ತಿದೆ" ಎಂದು ಖಂಡತುಂಡವಾಗಿ ಹೇಳಿರುತ್ತಾರೆ ಎಂದು ಮೊದಲಾಗಿ ಹರಿದಾಸರ ಅಭಿಪ್ರಾಯವಿರುತ್ತದೆ.

ಅಂತೂ ಈ ಉದಾಹರಣೆಗಳಿಂದ ಪಾಶ್ಚಾತ್ಯ ಸಂಶೋಧಕರ ಸಂಶೋಧನೆ ಪ್ರಾಮಾಣಿಕವಲ್ಲ. ಅವರಲ್ಲಿ ಮೋಸ ತಪ್ಪು ಕಲ್ಪನೆಗಳು ಸಾಕಷ್ಟು ಜಾಗ ಮಾಡಿಕೊಂಡಿವೆ. ಮತ್ತು ಭಾರತೀಯರನ್ನು ಧರ್ಮಸಂಸ್ಕೃತಿಗಳಿಂದ ಭ್ರಷ್ಟರನ್ನಾಗಿ ಮಾಡಿ ಕ್ರಿಸ್ತಮತದೊಳಗೆಳೆದುಕೊಳ್ಳುವ ದುರುದ್ದೇಶಪೂರಿತವೂ ಆಗಿದೆ ಎಂದು ಗೊತ್ತಾಗುತ್ತದೆ. ಆದುದರಿಂದ ಪಾಶ್ಚಾತ್ಯ ಸಂಶೋಧಕರ ಸಂಶೋಧನಾ ಶಾಸ್ತ್ರದ ಆಧಾರದ ಮೇಲೆ ವಿಶ್ವಾಸವಿಟ್ಟ ಮತ್ತು ಪಾಶ್ಚಾತ್ಯರಿಂದ ಪ್ರಭಾವಿತರಾದ ಮೂಲಕ ಭಾರತೀಯ ಶರೀರದಲ್ಲಿ ವಿಲಾಯತೀ ಅಂತಃಕರಣ ಹುಟ್ಟಿಸಿಕೊಂಡ ಡಾ| ಸಾಲೆತ್ತೂರು ಮೊದಲಾದವರು ಎಷ್ಟೇಪಂಡಿತರಾದರೂ ಅವರ ಸಂಶೋಧನೆಯು ಎಷ್ಟರ ಮಟ್ಟಿಗೆ ಪ್ರಾಮಾಣಿಕ ಮತ್ತು ಗ್ರಾಹ್ಯವೆಂದು ನಂಬಲು ಬರುವಂತಿಲ್ಲ.

ಇದನ್ನೆಲ್ಲಾ ನೋಡುವಾಗ—

ಆಜನ್ಮನ�ः ಶಾಠ್ಯಮಶಿಕ್ಷಿತೋಯಃ ತಸ್ಯಾ ಪ್ರಮಾಣಂ ವಚನಂ ಜನಸ್ಯ |
ಪರಾತಿಸಂಧಾನಮಧೀಯತೇಯ್ಯೈಃ ವಿದ್ಯೇತಿತೆಸಂತುಕಿಲಾಪ್ತವಾಚಃ ||

ಎಂಬ ಕಾಳಿದಾಸನ ವಾಕ್ಯ ನೆನಪಾಗುತ್ತದೆ. ಕಾಳಿದಾಸನು ಈ ಶ್ಲೋಕದಲ್ಲಿ ಹೇಳುತ್ತಾನಲ್ಲಾ "ಜನ್ಮಪ್ರಭೃತಿ ಸುಳ್ಳು ಹೇಳುವುದೇನೆಂಬುದು ಯಾರಿಗೆ ಗೊತ್ತಿರುವುದಿಲ್ಲವೊ ಅಂಥವರು ಸುಳ್ಳು ಹೇಳುವವರೆಂದಾದರೆ ನಂಬಿದ ಜನರನ್ನು ವಂಚಿಸುವುದೇ ಕಲೆಯೆಂದು ಗ್ರಹಿಸಿ ಅದನ್ನೆ ಜನ್ಮದಾರಭ್ಯ ಅಭ್ಯಾಸ ಮಾಡುವವರೇ ಆಪ್ತಪುರುಷರೆಂದೂ ಅವರ ವಾಕ್ಯವೇ ಪ್ರಮಾಣವೆಂದೂ ಆಗಬೇಕಾಯಿತಲ್ಲಾ ಎಂದು ಹೇಳಿರುವನು. ಅದರಂತೆಯೇ ಪ್ರಾಚೀನ ಋಷಿಗಳ ಮತ್ತು ಅವರ ಅನುಯಾಯಿಗಳ ಮಾತಿಗೆ ಬೆಲೆ ಇಲ್ಲವಾಗಿ ಇಂಥಾ ಪ್ರಚಾರಕರ ಅಸಂಬದ್ಧ ಮಾತುಗಳಿಗೆ ಮಹತ್ವ ಪ್ರಾಪ್ತವಾಗಿದೆ.

ಪ್ರಕೃತ ಇಷ್ಟೆಲ್ಲಾ ಕೋಲಾಹಲಕ್ಕೆ ಕಾರಣರಾದ ಡಾ| ಸಾಲೆತ್ತೂರರ ವಾಕ್ಯಗಳನ್ನು ಅವಶ್ಯವೆನಿಸಿದಷ್ಟು ಶ್ರೀ ಅಚ್ಯುತ ಶರ್ಮರು ತನ್ನ ಪುಸ್ತಕದ 50-53ರ ವರೆಗೆ ಹೆಮ್ಮೆಯಿಂದ ಎತ್ತಿಹಿಡಿದು ಬರೆದು ತೋರಿಸಿರುತ್ತಾರೆ. ಕನ್ನಡ ಭಾಷೆಯಲ್ಲಿ ಅನುವಾದ ಮಾಡಿಯೂ ಇದ್ದಾರೆ. ಐ. ಕೆ. ಶ್ರೀನಿವಾಸರಾಯರೂ ಸಹ ಡಾ| ಸಾಲೆತ್ತೂರವರಿಗೆ ಆ ಮಾತಿಗೋಸ್ಕರ ಕೃತಜ್ಞತಾ ವ್ಯಕ್ತಪಡಿಸಿದ್ದಾರೆ. ಆದುದರಿಂದ ಡಾ| ಸಾಲೆತ್ತೂರವರದ್ದೆಂದು ಶ್ರೀ ಅಚ್ಯುತಶರ್ಮರಿಂದ ಉದಾಹೃತವಾದ ಕನ್ನಡ ಭಾಷಾಂತರವನ್ನು ಇಲ್ಲಿ ಅನುವಾದ ಮಾಡುವುದುಚಿತವೆಂದು ಭಾವಿಸಿ ಈ ಕೆಳಗೆ ಕೊಡಲಾಗಿದೆ.

## ಕನ್ನಡ ಜಿಲ್ಲೆಯ ದೇವಸ್ಥಾನಗಳ ವಿಚಾರದಲ್ಲಿ—

ಕನ್ನಡ ಜಿಲ್ಲೆಯ ದೇವಸ್ಥಾನಗಳ ಸತ್ಯತೆಯು ಹೀಗಿದೆ:—ಈ ದಕ್ಷಿಣ ಕನ್ನಡ ಜಿಲ್ಲೆಯ ದೇವಸ್ಥಾನಗಳ ಅಧಿಕಾರಿಗಳಾದ ಸ್ಥಾನಿಕರನ್ನು ಅವರ ಹಕ್ಕಿನದಾದ ದೇವಸ್ಥಾನಗಳ ಹಕ್ಕನ್ನೂ ದೇವಸ್ಥಾನಗಳನ್ನೂ ಅವರ ಪ್ರತಿಸ್ಪರ್ಧಿ ಮತದವರಾದ ಮಾಧ್ವರು ಬಲಾತ್ಕಾರದಿಂದ ತಮ್ಮ ಸ್ವಾಧೀನಪಡಿಸಿಕೊಂಡದ್ದಾಗಿ ನಾನು 1922-25ರಲ್ಲಿ ಉಡುಪಿ ವಗೈರೆ ಸ್ಥಳಗಳನ್ನು ಸಂದರ್ಶಿಸಿ ಶೋಧನೆ ಮಾಡಿದ್ದಲ್ಲಿ ತಿಳಿದುಬಂದಿದೆ. ನಾನು ಈ ದೇವಸ್ಥಾನಗಳಲ್ಲಿ ಸ್ಥಾನಿಕರಿಗೆ ಇರುವ ಹಕ್ಕಿನ ವಿಚಾರದಲ್ಲಿ ಸ್ಥಾನಿಕರಿಗೂ ವೈಷ್ಣವರಾದ ಮಾಧ್ವರಿಗೂ ಆದ ಜಗಳವನ್ನು ಈ ರೀತಿ ವಿವರಿಸಿಕೊಟ್ಟಿರುತ್ತೇನೆ. ಮಾಧ್ವರಿಂದ ದೇವಸ್ಥಾನಗಳ ಹಕ್ಕಿನ ಸ್ವಾಧೀನವು ಶಾಂತಿಯಿಂದ ನಡೆಯಲಿಲ್ಲ. ಬಲಾತ್ಕಾರದಿಂದಲೇ ಸ್ಥಾನಿಕರಿಂದ ದೇವಸ್ಥಾನಗಳ ಹಕ್ಕನ್ನು ಸ್ವಾಧೀನಪಡಿಸಿಕೊಳ್ಳಲಾಗಿದೆ. ಇದನ್ನು ಕೆಲವು ದೇವಸ್ಥಾನಗಳಲ್ಲಿ ಇರುವ ವಿಗ್ರಹಗಳ ಪರಿಸ್ಥಿತಿಯೊಂದನ್ನು ನೋಡಿದರೆ ತಿಳಿಯಬಹುದು. ಸ್ಥಾನಿಕರ ಸ್ವಾಧೀನವಿದ್ದ ಹೆಚ್ಚಿನ ವಿಗ್ರಹಗಳು ವೈಷ್ಣವರ ಸ್ವಾಧೀನ ಬಂದನಂತರ ಹಾಳುಗೆಡವಲ್ಪಟ್ಟು, ದೇವಸ್ಥಾನದ ಹತ್ತಿರ ಎಸೆಯಲ್ಪಟ್ಟದ್ದು ಕಾಣಲು ಸಿಕ್ಕುತ್ತಿವೆ. (ಈ ಅನ್ಯಾಯಗಳು ಮುಸ್ಲಿಮರಿಂದ ಆಗಲು ಸಾಧ್ಯವಿಲ್ಲ. ಏಕೆಂದರೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮುಸ್ಲಿಮರ ಆಕ್ರಮಣ ನಡೆದಿಲ್ಲ. ಅಥವಾ ಟಿಪ್ಪುಸುಲ್ತಾನನ ಕಾಲದಲ್ಲೂ ನಡೆದದ್ದೇ ಇಲ್ಲ). ಇದನ್ನು ಧೃಢೀಕರಿಸಲು ಈ ಕೆಲವು ದೃಷ್ಟಾಂತಗಳೇ ಸಾಕು. ಕ್ರೋಡಾಶ್ರಮವೆಂದು ಹೇಳಲ್ಪಡುವ ಮಲ್ಪೆಯಲ್ಲಿ ಅಲ್ಲಿಯ ಮಲ್ಲಿಕಾರ್ಜುನ ಮೂಲವಿಗ್ರಹವು ದೇವಸ್ಥಾನದಲ್ಲಿ ಕಾಣಲ್ಪಡುತ್ತದೆ. ಪ್ರಧಾನವಾದ ಉಡುಪಿ ಅನಂತೇಶ್ವರ ದೇವಸ್ಥಾನವು ಆದಿಯಲ್ಲಿ ಶೈವರ ಪ್ರಧಾನ ಸ್ಥಳವಾಗಿತ್ತೆಂಬುದನ್ನು ಈ ಮೊದಲೇ ನಾನು ಬರೆದ ಏನ್ಸಿಯಂಟ್ ಕರ್ನಾಟಕದ ಭಾಗ I ಪುಟ 449ರಲ್ಲಿ ತಿಳಿಸಿರುತ್ತೇನೆ. ಈ ಅನಂತೇಶ್ವರ ದೇವಸ್ಥಾನವು ನಿಟ್ಟೂರಿನ ಸೋಮಲಿಂಗ ದೇವಸ್ಥಾನವು ಕೂಡ ಸ್ಥಾನಿಕರಿಂದ ಬಲಾತ್ಕಾರವಾಗಿ ಎಳೆದುಕೊಳ್ಳಲ್ಪಟ್ಟು ಮಾಧ್ವರು ಸ್ವಾಧೀನಪಡಿಸಿಕೊಂಡದ್ದಾಗಿದೆ. ಇಲ್ಲಿಯ ಸೋಮಲಿಂಗ ವಿಗ್ರಹವನ್ನು ಹೊರಹಾಕಿ ಅದರ ಸ್ಥಳದಲ್ಲಿ ವೆಂಕಟ್ರಮಣ ವಿಗ್ರಹವನ್ನು ಇರಿಸಲಾಗಿದೆ. ಅಲೂಪರ ಪುರಾತನ ಸ್ಥಳವಾದ ಉದ್ಯಾವರದಲ್ಲಿ ಮಹಾದೇವ ವಿಗ್ರಹವನ್ನು ಹೊರಹಾಕಿ ಗಣಪತಿ ವಿಗ್ರಹವು ಇರಿಸಲ್ಪಟ್ಟಿದೆ. ಇದೇ ಉಡುಪಿ ತಾಲೂಕಿನ ಉಪ್ಪೂರಲ್ಲಿ ಕೂಡ ಈಶ್ವರ ಲಿಂಗದ ಬದಲಿಗೆ ಗಣಪತಿಯನ್ನು ಇರಿಸಲಾಗಿದೆ. ಉಡುಪಿಯ ಸರಹದ್ದಿನಲ್ಲಿದ್ದ ಸ್ಥಾನಿಕರ 20 ಮಠಗಳು ಈಗ ವೈಷ್ಣವರ ಕೈಸೇರಿದೆ. ಅದೂ ಅಲ್ಲದೆ ಇದಕ್ಕೆ ಸೇರಿಸಿ ಇನ್ನೂ ಕೆಲವು ದೇವಸ್ಥಾನಗಳು ಸ್ಥಾನಿಕರ ಸ್ವಾಧೀನವಿದ್ದು ವೈಷ್ಣವರ ಸ್ವಾಧೀನ ಬಂದದ್ದನ್ನು ಜಿಲ್ಲೆಯ ಕೇಂದ್ರಗಳಲ್ಲಿ ನೋಡಬಹುದು. ಉದಾಹರಣೆಗಾಗಿ ಮಂಗಳೂರಿನ ತ್ರಿಶೂಲೇಶ್ವರ ಮತ್ತು ಶರಭೇಶ್ವರ ದೇವಸ್ಥಾನಗಳು, ಉಳ್ಳಾಲ ಸೋಮೇ

ಶ್ವರ ದೇವಸ್ಥಾನ ಈ ಜಿಲ್ಲೆಯ ಪ್ರಸಿದ್ಧಪಟ್ಟ ಶ್ರೀಸುಬ್ರಮ್ಮಣ್ಯ ದೇವಸ್ಥಾನ ಅಲ್ಲದೆ ಕಬ್ಬಿನಾಲೆ ಮತ್ತು ಹೆಬ್ರಿ ದೇವಸ್ಥಾನಗಳು.

ಸ್ಥಾನಿಕರ ಮತ್ತು ಮಾಧ್ವರ ಒಳಗಿನ ದ್ವೇಷವು ಹೆಚ್ಚಿದ್ದು ಉಡುಪಿಯಲ್ಲಿ. ಇದು ನಡೆದದ್ದು ವಾದಿರಾಜ ಸ್ವಾಮಿಗಳ ಕಾಲದಲ್ಲಿ (AD 1614) ಎಂದು ಅಲ್ಲಿಯ ಆಧಾರಗಳಿಂದ ತಿಳಿದು ಬರುತ್ತದೆ. ಇದು ಹೆಚ್ಚಿನ ಮಟ್ಟಿಗೆ ಮೇಲೆ ಹೋದದ್ದು ಅಲ್ಲಿಯ ಕೃಷ್ಣ ಮಠ ಮತ್ತು ಅದರ ಹತ್ತಿರ ಇರುವ ಕೆರೆಯನ್ನು ಕಟ್ಟಿಸುವ ಸಮಯದಲ್ಲಾಗಿದೆ. ಕೃಷ್ಣಮಠ ಮತ್ತು ಕೆರೆಯು ಇರುವ ಭೂಮಿಯು ಸ್ಥಾನಿಕರದ್ದಾಗಿತ್ತು. ಅಲ್ಲದೆ 8 ಮಠಗಳ ಅಡಿಸ್ಥಳಗಳು ಕೂಡಾ ಸ್ಥಾನಿಕರದ್ದೇ ಇತ್ತು. ಆಗ ನಿಟ್ಟೂರು ಸ್ಥಾನಿಕರು ಬಹಳ ಪ್ರಬಲರಾಗಿದ್ದರು ಎಂದು ತಿಳಿದು ಬರುತ್ತದೆ. ನಿಟ್ಟೂರಿನ ಸೋಮಲಿಂಗವನ್ನು ಹೊರಹಾಕಿ ವೆಂಕಟ್ರಮಣ ವಿಗ್ರಹವನ್ನು ಆ ದೇವಸ್ಥಾನದಲ್ಲಿ ಇರಿಸುವ ಸಮಯದಲ್ಲಿ ಆದ ಜಗಳದ ಸಮಯ ವ್ಯವಹರಿಸುತ್ತಿದ್ದ ಕೆಲವು ಮಾತುಗಳು ಅಗತ್ಯ ತಿಳಿಯತಕ್ಕವುಗಳಾಗಿವೆ. ಮಾಧ್ವರ ಕಡೆಯಿಂದ ವಾದಿರಾಜ ಸ್ವಾಮಿಗೂ ನಿಟ್ಟೂರಿನವರಿಗೂ ಆದ ಜಗಳದಲ್ಲಿ ಪಂಚಮರು ಅಂದರೆ ಈಗಿನ ಹರಿಜನರು ನಿಟ್ಟೂರಿನವರ ಪಕ್ಷ ಸೇರಿ ಮಾಧ್ವರಿಗೆ ವಿರೋಧ ನಿಂತರು. ವೈಷ್ಣವರು ನಿಟ್ಟೂರಿನ ಸೋಮಲಿಂಗವನ್ನು ಹೊರಹಾಕಿ ವೆಂಕಟ್ರಮಣನನ್ನು ಇರಿಸಿ ತಾವು ಜೈಸಿದ ಕುರುಹಿಗಾಗಿ ತುಳು ಭಾಷೆಯಲ್ಲಿ "ನಿಟ್ಟೂರು ಸೋಮಲಿಂಗ ಬೋನ ತಂಕರ ತಂಞಣ ತಂಕರ" ಎಂಬುದಾಗಿ ಘೋಷಣೆ ಮಾಡುತ್ತಿದ್ದುದೂ, ಮತ್ತು ಅದರ ಪ್ರತಿವಿರೋಧವಾಗಿ ಪಂಚಮರು "ಚಿಟ್ಟುಪಾಡಿ ಬಲ್ಲಾಳೆರ್ ಬೇಂಟೆ ಕೊರಿಯೊರೊ? ನಿಡುಂಬೂರು ಬಲ್ಲಾಳೆರ್ ದಿಡುಂಬುಗುದ್ಯೆರೊ" ಎಂಬುದಾಗಿ ಚಿಟ್ಟುಪಾಡಿ ಮತ್ತು ನಿಡುಂಬೂರು ಬಲ್ಲಾಳರು ವಾದಿರಾಜ ಸ್ವಾಮಿಗೆ ಸಹಕರಿಸಿದ್ದರಿಂದ ಆ ಬಲ್ಲಾಳರನ್ನು ಹೀನಾಯವಾಗಿ ಹೇಳಿದ ಮಾತುಗಳು ಓದುಗರಿಗೆ ಆಸಕ್ತಿ ಕೊಡುತ್ತದೆ. ವೈಷ್ಣವರ ಸಂಖ್ಯೆಯು ನಿಟ್ಟೂರಿನವರ ಸಂಖ್ಯೆಯಿಂದ ಜಾಸ್ತಿ ಆಗಿ ಇದ್ದುದರಿಂದ ವೈಷ್ಣವರ ಕೈಯೇ ಮೇಲಾಯಿತು. ನಿಟ್ಟೂರಿನವರ ಮೇಲೆ ಅಧಿಕಾರ ನಡೆಸುವ ಅವಕಾಶವು ಮಾಧ್ವರಿಗೆ ಸಿಕ್ಕಿತು. ಇದರಿಂದಾಗಿ ಕರ್ನಾಟಕ ಮತ್ತು ದಕ್ಷಿಣ ಹಿಂದುಸ್ಥಾನದಲ್ಲಿ ವೈಷ್ಣವರ ಪ್ರಾಬಲ್ಯ ಹೆಚ್ಚಿತು. ಆಗಿನ ವಿಜಯನಗರದ ಚಕ್ರವರ್ತಿಗಳು ಕೂಡ ವೈಷ್ಣವರ ಒತ್ತಾಸೆಗೆ ಬಲಿಬಿದ್ದು ವೈಷ್ಣವರಾದರು. ಇದರಿಂದಾಗಿ ನಿಟ್ಟೂರಿನ ಜನರ ಕಷ್ಟವನ್ನು ಎತ್ತಿಹಿಡಿದು ವಿಚಾರಿಸುವವರೇ ಇಲ್ಲದಂತಾಯಿತು. ನಿಟ್ಟೂರಿನ ಜನರಿಗೂ ಮಾಧ್ವರಿಗೂ ಆದ ಈ ಜಗಳದಿಂದ ತುಳುವ ರಾಜ್ಯದಲ್ಲಿ ಇನ್ನಿತರ ಕೆಲವು ಸಾಕ್ಷ್ಯಗಳಿಂದಲೂ, ತುಳುವದ ಸ್ಥಾನಿಕರ ಅವನತಿಗೆ ಕಾರಣವಾಯಿತು. 17ನೇ ಶತಮಾನದ ಆದಿಯಲ್ಲಿ ಮೇಲೆ ಹೇಳಿದ ವಾದಿರಾಜ ಸ್ವಾಮಿಯ ಒತ್ತಾಸೆಯಿಂದ ಅವನ ಅಧಿಕಾರವು ತುಳುವರಲ್ಲಿ ಪ್ರಬಲಗೊಂಡಿತು.

ಈಗ ವೈಷ್ಣವರ ಸ್ವಾಧೀನ ಇರುವ ತುಳುವರ ದೇವಸ್ಥಾನಗಳು ಸ್ಥಾನಿಕರ ಆಸ್ತಿಗಳಾಗಿದ್ದುವು ಎಂಬುದಕ್ಕೆ ಸಂದೇಹವೇ ಇಲ್ಲ. ಯಾರೂ ಈ ವಿಚಾರದಲ್ಲಿ ಆಶ್ಚರ್ಯ

ಪಡಬೇಕೆಂದಿಲ್ಲ. ಕೆಲವು ಅನೇಕ ಕಾಲ ಶೈವರ ವಶವಾಗಿದ್ದ ದೇವಸ್ಥಾನಗಳು ಒಂದು ಕಾಲದಲ್ಲಿ ಬುದ್ಧರ ಸ್ಥಳವಾಗಿತ್ತು. ಈ ವಿಷಯವನ್ನು ನಾನು ನನ್ನ Ancient Karnataka Vol. I. ಪುಟ 379 n-I.384) ಎಂಬ ಪುಸ್ತಕದಲ್ಲಿ ವಿವರಿಸಿದ್ದೇನೆ (ಬಿ. ಎ. ಎಸ್.)

ಡಾ| ಸಾಲೆತ್ತೂರರವರು ತಾನು ಸ್ವತಹ 1922ರಲ್ಲಿ ಉಡುಪಿ ವಗೈರೆ ಸ್ಥಳಗಳನ್ನು ಸಂದರ್ಶಿಸಿ ಸಂಶೋಧನೆ ಮಾಡಿ ಬರೆದದ್ದು ಎನ್ನುತ್ತಾರೆ. ವಸ್ತುತಃ ನೋಡಿ (ಸಂದರ್ಶಿಸಿ) ಬರೆದವದ್ದಲ್ಲವೆಂದು ಖಂಡಿತ ಹೇಳಬಹುದು. ಏಕೆಂದರೆ ಕ್ರೋಡಾಶ್ರಮವೆಂದು ಹೇಳುವ ಮಲ್ಪೆಯಲ್ಲಿ ಅಲ್ಲಿಯ ಮಲ್ಲಿಕಾರ್ಜುನ ಮೂಲ ವಿಗ್ರಹವು ದೇವಸ್ಥಾನದ ಹತ್ತಿರ ಕೆರೆಗೆ ಎಸೆಯಲ್ಪಟ್ಟಿದೆ ಎಂದು ಬರೆದಿದ್ದಾರೆ. ಇದು ಸಂಪೂರ್ಣ ಸುಳ್ಳು. ಮತ್ತು ನೋಡಿ ತಿಳಿದುಕೊಂಡದ್ದೂ ಅಲ್ಲ. ಕ್ರೋಡಾಶ್ರಮವೆಂದರೆ ಕೊಡವೂರು. ಮಲ್ಪೆಯಲ್ಲ. ಮಲ್ಪೆಯಲ್ಲಿ ವಡಭಾಂಡೇಶ್ವರ ದೇವಾಲಯವಿದ್ದು ಬಲರಾಮ ವ ರಾಮ ವಿಗ್ರಹವಿದೆಯಲ್ಲದೆ ಮಲ್ಲಿಕಾರ್ಜುನ ವ ಶಂಕರನಾರಾಯಣ ದೇವರ ವಿಗ್ರಹ ಎಂದೂ ಇರಲಿಲ್ಲ, ಈಗಲೂ ಇರುವುದಿಲ್ಲ. ಕೊಡವೂರಲ್ಲಿ ಶಂಕರನಾರಾಯಣ ದೇವಾಲಯದ ಮಗ್ಗುಲಲ್ಲಿ 1922ನೇ ಇಸವಿಗಿಂತ ಮೊದಲೆ ಕಟ್ಟಿಸಿದ ಗರ್ಭಗುಡಿಯಲ್ಲಿ ಮಲ್ಲಿಕಾರ್ಜುನ ಲಿಂಗವಿರುತ್ತಿದ್ದು ಶಂಕರನಾರಾಯಣ ದೇವಸ್ಥಾನದ ಅರ್ಚಕರಾದ ಶೀವಳ್ಳಿಯವರೇ ಎಂದಿನಿಂದಲೂ ಪೂಜಿಸುತ್ತಿದ್ದಾರೆ. ಡಾ| ಸಾಲೆತ್ತೂರರು ಕೊಡವೂರಿಗೆ ಹೋಗಿ ನೋಡಿದ್ದು ನಿಜವಾದರೆ ಗರ್ಭಗುಡಿಯೊಳಗಿದ್ದ ಮಲ್ಲಿಕಾರ್ಜುನ ಲಿಂಗವು ಕೆರೆಯೊಳಗೆ ಹೇಗೆ ಕಾಣಿಸಿತು? ಮತ್ತು ಕೆರೆಗೆ ಇವರು ಹೋದಾಗ ಎಸೆದರೋ? ವ ಹಿಂದಕ್ಕೆನೇ ಸ್ಥಾನಿಕರ ಜಗಳದಲ್ಲಿ ಶೀವಳ್ಳಿಯವರಿಂದ ಎಸೆಯಲ್ಪಟ್ಟಿತ್ತೋ? 1922ನೇ ಇಸವಿಯಲ್ಲಿ ಹೋದಾಗ ಹಿಂದಕ್ಕೆ ಎಸೆದದ್ದು ಇವರ ಕಣ್ಣಿಗೆ ಹೇಗೆ ಬಿದ್ದಿತು? ಎಲ್ಲಾ ಸುಳ್ಳು. ವಾಸ್ತವವೆಂದರೆ ಕೆರೆಯಲ್ಲಿ ಮೂಡಿಬಂದದ್ದು ಶಂಕರನಾರಾಯಣ ಲಿಂಗ. ಅದು ಯಾವಾಗಲೂ ಕಾಣಸಿಗುವುದಿಲ್ಲ. ಕೆರೆಯನ್ನು ಸುತ್ತಲೂ ಸಣ್ಣ ಬಾವಿಯಂತೆ ಮಾಡಿ ಕಟ್ಟಿಸಿ ಅದರ ಮೇಲೆ ಪಾಣಿಪೀಠವಿಟ್ಟು ಅದರಲ್ಲಿ ಬೇರೆ ಒಂದು ಶಿವಲಿಂಗ ಪ್ರತಿಷ್ಠಿಸಿ ಅದನ್ನೇ ಈಗ ಪೂಜೆ ಮಾಡುತ್ತಾ ಇರುವುದು ಕಾಣುತ್ತೇವೆ. ಶಂಕರನಾರಾಯಣ ವಿಗ್ರಹವು ಪಾಣಿಪೀಠದ ಕೆಳಗೆ ಬಾವಿಯಲ್ಲಿರುತ್ತಿದ್ದು ಕಾಣಸಿಗುವುದಿಲ್ಲ. ಭಕ್ತರ ಸಂದರ್ಶನಾರ್ಥವಾಗಿ ಪಾಣಿಪೀಠದ ಮೇಲೆ ಬೇರೆ ಒಂದು ಶಿವಲಿಂಗವನ್ನು ಪ್ರತಿಷ್ಠಿಸುವುದಕ್ಕೋಸ್ಕರ ವಿಧಿವತ್ತಾಗಿ ತಯಾರಿಸಿದ ಶಿವಲಿಂಗವೇ ಮಲ್ಲಿಕಾರ್ಜುನ ದೇವಸ್ಥಾನದಲ್ಲಿ ಮಲ್ಲಿಕಾರ್ಜುನನೆಂದು ಸ್ಥಾಪಿಸಿ ಪೂಜಿಸಲಾಗುತ್ತಿದೆ. ಪೆರಂಪಳ್ಳಿಯಲ್ಲಿ ಒಂದು ಮಹಾ ಅಶ್ವತ್ಥವೃಕ್ಷದ ಈಶಾನ್ಯ ದಿಕ್ಕಿಗೆ ಚಾಚಿದ ಒಂದು ಗೆಲ್ಲಿನೊಳಗೆ ಅಡಗಿರುತ್ತಿದ್ದ ಶಿವಲಿಂಗವು ಸ್ವಪ್ನಸೂಚಿತವಾಗಿ ಅಲ್ಲಿಂದ ತಂದು ಕೊಡವೂರಲ್ಲಿ ಪಾಣಿಪೀಠದ ಮೇಲೆ ಸ್ಥಾಪಿಸಲ್ಪಟ್ಟು ಪೂಜಿಸಲ್ಪಡುತ್ತದೆ. ಇದೆಲ್ಲಾ ಕಾರ್ಯಕಲಾಪಗಳು ಸ್ಥಾನಿಕರ ಸಂಪರ್ಕವಿಲ್ಲದೆ ಶೀವಳ್ಳಿಯವರಿಂದಲೇ ನೆರವೇರಿಯದೆ. ಸ್ಥಾನಿಕರು ಮಾಡಿದ

ದೊಡ್ಡ ಕೆಲಸವೆಂದರೆ ದೇವರ ನೈವೇದ್ಯದ ಅಮೃತಪಡಿ ಅಕ್ಕಿಗಿದ್ದ ಆಸ್ತಿಯನ್ನು ಸೆಟ್ಲ್ ಮೆಂಟ್ ಕಾಲದಲ್ಲಿ ತಮ್ಮದೆಂದು ಸಾಧಿಸಿ ತಮ್ಮ ಹೆಸರಲ್ಲಿ ಮಾಡಿಕೊಂಡದ್ದು. ದೇವಸ್ಥಾನದ ಕೆಲವು ತಮ್ಮ ಸ್ವಾಧೀನವಿದ್ದ ಆಸ್ತಿಗಳ ತೀರ್ವೆ ಕೊಡದೆ ಬಾಕಿ ಮಾಡಿ ಸರಕಾರದವರ ಕಡೆಯಿಂದ ಏಲಂ ಮಾಡಿಸಿ ಅದನ್ನು ತಾವು ಪಡೆದು ದೇವಸ್ಥಾನಕ್ಕೆ ಆಸ್ತಿ ಇಲ್ಲದಂತೆ ಮಾಡಿದ್ದು. ಇದೇ ಶಿವಭಕ್ತರಾದ ಶಿವಬ್ರಾಮ್ಹಣರು ಮಾಡಿದ ಶಿವ ಸೇವೆ. ಅಂತೂ ಕೊಡವೂರಲ್ಲಿ 1. ಕೆರೆಯಲ್ಲಿ ಮೂಡಿಬಂದ ಶಂಕರನಾರಾಯಣಲಿಂಗ, 2. ಪಾಣಿಪೀಠದ ಮೇಲೆ ಇರುವ ಶಂಕರನಾರಾಯಣ ಲಿಂಗ, ಮತ್ತೊಂದು ಮಲ್ಲಿಕಾರ್ಜುನ ಲಿಂಗ—ಹೀಗೆ ಇವೆ. ಇದರಲ್ಲಿ ಡಾ| ಸಾಲೆತ್ತೂರರವರು ಎಷ್ಟು ವಿಪರ್ಯಾಸ ಮಾಡಿರುತ್ತಾರೆ ಎಂಬುದು ಈಗ ತಿಳಿಯಬಹುದು. ಆದುದರಿಂದ ಡಾ| ಸಾಲೆತ್ತೂರರು ಕೊಡವೂರಿಗೆ ಹೋಗಲಿಲ್ಲ, ನೋಡಲಿಲ್ಲ. ಸ್ಥಾನಿಕರ ದುರ್ಬೋಧನೆಯಿಂದ ಅಸಂಬದ್ಧ ಬರೆದರು—ಎಂದರಿಯಬಹುದು.

1. ಶ್ರೀ ಪಾದೂರು ಗುರುರಾಜ ಭಟ್ಟರೂ ಸಹ ಖಂಡತುಂಡವಾಗಿ "ಡಾ| ಸಾಲೆತ್ತೂರವರು ಪ್ರತ್ಯಕ್ಷ ನೋಡಿ ತಿಳಿದುಕೊಂಡು ಬರೆದದ್ದು ಅಲ್ಲಾ" ಅಂತ ಬರೆದದ್ದು ಮಾತ್ರವಲ್ಲದೆ ಉದಾಹರಣೆ ಕೊಟ್ಟು ಬರೆದಿರುತ್ತಾರೆ. ಅದನ್ನು ಮುಂದೆ ವಿವರಿಸಲಾಗುತ್ತದೆ.

2. ಇಷ್ಟು ಮಾತ್ರವಲ್ಲದೆ ಈ ಲೇಖನ ಬರೆಯುವಾಗ ಡಾ| ಸಾಲೆತ್ತೂರರು ಅನೇಕ ತಪ್ಪು ಕಲ್ಪನೆಗಳನ್ನೂ ಮತ್ತು ವಿಶಿಷ್ಟ ಕೆಲವು ಅಪೇಕ್ಷೆಗಳನ್ನೂ (ಉದ್ದೇಶಗಳನ್ನೂ) ಇಟ್ಟುಕೊಂಡೇ ಬರೆದಿರುವರು ಎಂಬುದನ್ನು ಕಂಡುಹಿಡಿಯಲು ಹೆಚ್ಚು ತಡವಾಗಲಾರದು.

3. (1) ಕೌಟಿಲ್ಯನ ಅರ್ಥಶಾಸ್ತ್ರದ ಜಿಲ್ಲಾಧಿಕಾರಿ ಸ್ಥಾನಿಕರು ಬೇರೆ, ಶಾಸನಗಳ ಧರ್ಮಾಧಿಕಾರಿ ಸ್ಥಾನಿಕರು ಬೇರೆ, ಅಂದರೆ (1) ಜೈನರು, (2) ಕಾಳಾಮುಖರು, (3) ಶ್ರೀ ವೈಷ್ಣವರು, ಇವರು ಬೇರೆ, ಅಂಬಲವಾಸಿ ಸ್ಥಾನಿಕ ಜಾತಿಯ ಸ್ಥಾನಿಕರು ಬೇರೆ ಎಂಬ ವಿವೇಚನೆ ಮಾಡದೆ ಈ ದೇವಕಾರಿಗಳಿಗೇನೇ ಸರ್ವಾಧಿಕಾರವಿತ್ತೆಂದು ತಪ್ಪು ಗ್ರಹಿಸಿ ಅದು ಈಗ ಇಲ್ಲದ್ದರಿಂದ ಅದರ ಕಾರಣ ಹುಡುಕುತ್ತಾ ಪೂರ್ವೋಕ್ತ ಕಟ್ಟುಕತೆ ಕಲ್ಪಿಸಿದ್ದಾರೆ. ಅದರಲ್ಲಿ ತಥ್ಯಾಂಶ ಸ್ವಲ್ಪವೂ ಇರುವುದಿಲ್ಲ. ಒಂದು ವೇಳೆ ಡಾ| ಸಾಲೆತ್ತೂರವರು ಹೇಳುವಂತೆ ಈ ದೇವಕಾರಿಗಳಿಗೆ ಉತ್ತಮ ಬ್ರಾಮ್ಹಣ್ಯ, ಶ್ರೇಷ್ಠ ಅಧಿಕಾರ, ದೇವಸ್ಥಾನದ ಅರ್ಚಕತನ, ಇವುಗಳೆಲ್ಲಾ ಒಂದು ಕಾಲದಲ್ಲಿ ವಸ್ತುತ ಇರುತ್ತಿದ್ದರೆ ಅವುಗಳನ್ನು ಶಿವಳ್ಳಿಯವರು ಕಸಿದುಕೊಂಡ ಬಳಿಕ ಮಾರಾಮಾರಿ ಅಗಿ ಹೊರ ಹಾಕಿದ ಮೇಲೆ ಅದೇ ದೇವಸ್ಥಾನಗಳಲ್ಲಿ ಶಿವಳ್ಳಿಯವರ ಕೈಕೆಳಗೆ ದೇವಕಾರಿ ಕೆಲಸಗಳನ್ನು ಮಾಡುತ್ತಾ ಇರುತ್ತಿದ್ದು, ಸ್ಥಾನಿಕರೆಂಬ ಬ್ರಾಮ್ಹಣೇತರ ಜಾತಿಯವರೆಂದು ಹೇಳಿಸಿಕೊಂಡು, ಬ್ರಾಮ್ಹಣರ ಸಾಪಂಕ್ತ್ಯ ಸಹ ಇಲ್ಲದೆ, ಅಪಮಾನಕರವಾದ ವೃತ್ತಿಯನ್ನು ಅವಲಂಬಿಸುವರೇ, ಅವಲಂಬಿಸಿರಬಹುದೇ? ಈಗಲೂ ಶ್ರೀಕೃಷ್ಣಮಠ, ಶ್ರೀಮ-

ದನಂತೇಶ್ವರ ದೇವಾಲಯ ಮೊದಲಾದ ಸಮಸ್ತ ದೇವಾಲಯಗಳಲ್ಲಿಯೂ ಬ್ರಾಹ್ಮಣ ಶೀವಳ್ಳಿಯವರು ಅರ್ಚಕರಾಗಿಯೂ, ಸ್ಥಾನಿಕ ಜಾತಿಯವರು ದೇವಕಾರಿಗಳಾಗಿಯೂ ಮೊಯ್ಲಿ ಜಾತಿಯವರು ದೇವಡಿಗರಾಗಿಯೂ ಇರುತ್ತಿದ್ದಾರೆ. ಇಷ್ಟನ್ನಾದರೂ ಅರಿತು ಕೊಳ್ಳುವ ಶಕ್ತಿ ಡಾ| ಸಾಲೆತ್ತೂರರವರಿಗೆ ಇರಬಾರದೇ?

4. ಪಾದೂರು ಗುರುರಾಜ ಭಟ್ಟರು ಶಾಸನಗಳ ಆಧಾರದ ಮೇಲಿಂದ ದೇವ ಸ್ಥಾನಗಳ ಅಧಿಕಾರಿ ಮತ್ತು ನೌಕರರ ಒಂದು ನಕ್ಷೆ ಕೊಟ್ಟಿರುತ್ತಾರೆ. ಅದು ಹೀಗಿದೆ.




5. ದೇವರ ನೈವೇದ್ಯಕ್ಕೆ ಅಮೃತಪಡಿ ಸಲುವಾಗಿ ಇರುವ ದೇವಸ್ಥಾನದ ಆಸ್ತಿ ಯನ್ನು ತಾವೇ ಸಾಗುವಳಿ ಮಾಡುತ್ತಾ ಗೇಣಿ ಅಕ್ಕಿಯನ್ನು ದೇವಸ್ಥಾನಕ್ಕೆ ಒಪ್ಪಿಸಿ

ನೈವೇದ್ಯವಾದ ಬಳಿಕ ಆ ಅನ್ನವನ್ನು ತಮ್ಮ ದೇವಕಾರಿ ಕೆಲಸಕ್ಕೆ ಸಂಬಳವೆಂದು ಪಡೆದುಬಂದದ್ದು ಬಹುಕಾಲದ ರಿವಾಜು. ಕೆಲವು ಕಡೆಗಳಲ್ಲಿ ಅಮೃತಪಡಿ ಅಕ್ಕಿಗೋಸ್ಕರವಿದ್ದ ತಾವು ಸಾಗುವಳಿ ಮಾಡುವ ಆಸ್ತಿಯ ಗೇಣಿಯನ್ನೂ ಕೊಡದೆ ದೇವಕಾರಿ ಕೆಲಸವನ್ನೂ ಮಾಡದೆ ಉದ್ಧಟತನದಿಂದ ಆಸ್ತಿಗಳೆಲ್ಲಾ ತಮ್ಮದೇ ಸ್ವಂತದ್ದು ಎಂದು ಅಂದುಕೊಂಡಾಗ ಮುಕ್ತೇಸರರು ಮೊದಲಾದ ಅಧಿಕಾರಿಗಳು ಗ್ರಾಮಸ್ಥರ ಸಹಾಯದಿಂದ ಹೊಡದು ಹೊರಹಾಕಿ ದೇವಸ್ಥಾನದ ಆಸ್ತಿಯನ್ನು ಹಿಂತಿರುಗಿ ಪಡೆದದ್ದುಂಟು. ಇದು ನಿಜವಿದೆ. ಆದರೆ ಇದರ ಜವಾಬ್ದಾರಿ ಶೀವಳ್ಳಿ ಮಾಧ್ವರದ್ದಲ್ಲ. ಅವರು ಕೇವಲ ಅರ್ಚಕರು. ಅಧಿಕಾರಿಗಳು ಅಲ್ಲ. ಇದು ತಿಳಿದಿರಲಿ. ಹಿಂದಿನ ಚಿತ್ರದಿಂದ ಅದು ತಿಳಿಯುತ್ತದೆ. ಅಂದಮೇಲೆ ಶೀವಳ್ಳಿಯವರು ಅಧಿಕಾರವನ್ನು ಸ್ಥಾನಿಕರಿಂದ ಕಸಿದುಕೊಂಡದ್ದಲ್ಲ. ಆದುದರಿಂದ ಜಗಳವಾಯಿತು, ವಾದಿರಾಜರ ಕಾಲದಲ್ಲಾಯಿತು, ಇತ್ಯಾದಿಗಳು ಪ್ರಲಾಪ ಮಾತ್ರ.

6. ಮಾಧ್ವ ಶೀವಳ್ಳಿಯವರು ಅಹಿಚ್ಛತ್ರದಿಂದ ಕೆಲಕಾಲದ ನಂತರ ಬಂದರೆಂಬುದು ನಿಜ. ಆದರೆ ಮೊದಲು ಇದ್ದ ಬ್ರಾಮ್ಹಣರು ಸ್ಥಾನಿಕರೆಂಬುದು ಸುಳ್ಳು. ಮೊದಲು ಇದ್ದವರೆಂದರೆ ಕುಡಾಲಕರ, ಸದ್ಯ ಬ್ರಾಮ್ಹಣರು, ಮಟ್ಟು ಬ್ರಾಮ್ಹಣರು, ನಾಗಬ್ರಾಮ್ಹಣರು, ಬೇರೆ ಎಂಬುದಾಗಿ ಮುದ್ರಿಸಿದ ಸಹ್ಯಾದ್ರಿ ಖಂಡದ 15ನೇ ಅಧ್ಯಾಯದಿಂದ ತಿಳಿಯುತ್ತದೆ. ಅದರಲ್ಲಿ ಹಾಗೆ ಉಕ್ತವಾಗಿದೆ. ಸ್ಥಾನಿಕರು, ಶೀವಳ್ಳಿಯವರು ಬಂದ ಮೇಲೆ ಕೆಲವು ಸಮಯದ ನಂತರ ಹುಟ್ಟಿಕೊಂಡರೆಂಬುದು ಸದರಿ ಸಹ್ಯಾದ್ರಿ ಖಂಡದ 18, 19 ಅಧ್ಯಾಯದಲ್ಲಿ ಉಕ್ತವಾಗಿದೆ. ಅದೆಲ್ಲಾ ಸುಳ್ಳೆಂದರೆ ಸಾಲದು. ಕಾರಣ ಕೊಟ್ಟು ಸಮರ್ಥಿಸಬೇಕು, ರುಜುವಾತುಪಡಿಸಿ ಕೊಡಬೇಕು.

7. ಸಹ್ಯಾದ್ರಿ ಖಂಡದ 15ನೇ ಅಧ್ಯಾಯದಲ್ಲಿ ಹೇಳಿದ ಪ್ರಕಾರ ಶೀವಳ್ಳಿಯವರಿಗೆ ಪ್ರಾಪ್ತವಾದ ಅಧಿಕಾರ, ಗ್ರಾಮ, ಅರ್ಚಕತ್ವ ಮೊದಲಾದವುಗಳು ರಾಜಕೀಯವಾಗಿ ಅಂದರೆ ಮೊದಲು ಮಯೂರವರ್ಮನಿಂದಲೂ ತದನಂತರ ಆತನ ಮಗ ಚಂದ್ರಾಂಗದನಿಂದಲೂ ಕಸಿದುಕೊಡಲ್ಪಟ್ಟದ್ದಾಗಿರುತ್ತದೆ. ಇದು ಸ್ಥಾನಿಕರಿಂದ ಕಸಿದುಕೊಂಡು ಕೊಟ್ಟದ್ದಲ್ಲ. ಆದುದರಿಂದ ಡಾ| ಸಾಲೆತ್ತೂರರವರು ಶೇಖಮಹ್ಮದಿ ನಡೆಸಿದ್ದಾರೆ. ಅವರ ಮಾತಿನಲ್ಲಿ ಏನೂ ಅರ್ಥವಿಲ್ಲ.

8. "ದಕ್ಷಿಣ ಕನ್ನಡಾ ಜಿಲ್ಲೆಯಲ್ಲಿ ಮುಸಲ್ಮಾನರು ದೇವಾಲಯಗಳ ವಿಗ್ರಹಗಳನ್ನು ಬಡೆದು ಹಾಳುಗೆಡವಲಿಲ್ಲ. ಆದರೆ ಮಾಧ್ವ ವೈಷ್ಣವರು ಸ್ಥಾನಿಕರ ಸ್ವಾಧೀನವಿದ್ದ ಹೆಚ್ಚಿನ ವಿಗ್ರಹಗಳನ್ನು ಹಾಳುಗೆಡವಿದ್ದಾರೆ. ಹಾಗೆ ಎಸೆಯಲ್ಪಟ್ಟದ್ದು ಕಾಣಸಿಗುತ್ತವೆ" ಎಂದು ಮುಂತಾದ್ದಾಗಿ ಡಾ| ಸಾಲೆತ್ತೂರರು ದುರಾಗ್ರಹದಿಂದ ಬರೆದಿರುತ್ತಾರೆ. ಏಕೆಂದರೆ ಶ್ರೀಮಾಧ್ವ ವೈಷ್ಣವರು ಶಿವದ್ರೋಹಿಗಳಲ್ಲ. ವೈದಿಕ ದೇವತೆಗಳಾದ ಶಿವ, ಗಣಪತಿ, ದುರ್ಗಾ, ಸ್ಕಂದ ಮೊದಲಾದ ದೇವತೆಗಳನ್ನು ಭಕ್ತಿಯಿಂದ ವೈದಿಕ

ಪದ್ಧತಿ ಪ್ರಕಾರ ಪೂಜೆ ಮಾಡತಕ್ಕವರಿದ್ದಾರೆ. ಮತ್ತು ಯಾವ ದೇವಸ್ಥಾನಗಳ ಸ್ಥಾನಿಕರ ಸ್ವಾಧೀನದಲ್ಲಿ ಪೂಜಾದಿಗಳ ಕುರಿತು ಇರಲೂ ಇಲ್ಲ. ಅವುಗಳ ವಿಗ್ರಹಗಳನ್ನು ಮುರಿದು ಹಾಕುವ ಪ್ರಸಂಗವೂ ಇಲ್ಲ. ವಿಗ್ರಹಗಳನ್ನು ಭಿನ್ನಗೊಳಿಸಲೂ ಇಲ್ಲ. ಇದೆಲ್ಲಾ ಮಾಧ್ವರ ವಿರುದ್ಧ ಸಲ್ಲದ ಅಪಪ್ರಚಾರ ಮಾತ್ರ.

ಪಾದೂರು ಗುರುರಾಜ ಭಟ್ಟರು ಸಾಲೆತ್ತೂರು ಮೊದಲಾದವರ ಲೇಖನಗಳ ವಿಮರ್ಶೆ ಮಾಡಿ ತಮ್ಮ ಅಭಿಪ್ರಾಯ ಕೊಟ್ಟಿರುತ್ತಾರೆ. ಅದನ್ನು ಓದುಗರ ಅವಗಾಹನೆಗಾಗಿ ಕೆಳಗಡೆ ಕೊಡುತ್ತೇನೆ.

1. ದೇಗುಲದ ಅಧಿಕಾರಿ ಆಗಿ ಸ್ಥಾನಿಕನು ಶ್ರೀವೈಷ್ಣವರಲ್ಲೊ (ರಾಮಾನುಜರಿಂಬ) ಶೈವರಲ್ಲೊ ಜೈನರಲ್ಲೊ ಕಂಡು ಬರುತ್ತದೆ ಎಂಬುದು ವಿಚಾರಣೀಯ.

2. ಸಾಂತಿಗ ಎಂಬುದು ಸ್ಥಾನಿಕ ಪದದ ಪರಿವರ್ತಿತ ರೂಪವೆಂಬುದು ಸಮಂಜಸವಲ್ಲ. ಶಾಂತಿಕ ಪದದ ತದ್ಭವರೂಪವಾಗಬಹುದು.

3. ಕೌಟಿಲ್ಯನ ಅರ್ಥಶಾಸ್ತ್ರದ ಸ್ಥಾನಿಕನ ಮೂಲವೂ ಧರ್ಮಾಧಿಕಾರಿಯಾದ ಸ್ಥಾನಿಕನ ಮೂಲವೂ ಬೇರೆ ಬೇರೆಯಾಗಿತ್ತು ಎಂಬುದನ್ನು ಡಾ| ಸಾಲೆತ್ತೂರರು ವಿಶದಪಡಿಸುವುದಿಲ್ಲ.

4. ಈ ಪ್ರಬಂಧದ ಅಂತ್ಯಭಾಗದಲ್ಲಿ ಊಹಾಪೋಹಗಳನ್ನು ಆಧರಿಸಿ ಹಲವು ನಿರ್ಧಾರಗಳನ್ನು ಲೇಖಕರು ಮಾಡಿದಂತೆ ಕಂಡುಬರುತ್ತದೆ. ಇವುಗಳಿಗೆ ತೃಪ್ತಿಕರವಾದ ಆಧಾರಗಳಿಲ್ಲ. ದೇವಸ್ಥಾನದ ಕುರಿತಾದ ಅವರ ನಿರ್ಧಾರಗಳನ್ನು ಒಪ್ಪುವುದು ಬಹಳ ಕಷ್ಟ. ಅವರು (ಡಾ| ಸಾಲೆತ್ತೂರರು) ಪ್ರತ್ಯಕ್ಷ ದೇಗುಲಗಳನ್ನಾಗಲಿ, ಶಿಲ್ಪವನ್ನಾಗಲಿ ಪರೀಕ್ಷಿಸಿ ಅವುಗಳ ವೈಲಕ್ಷಣವನ್ನು ತಿಳಿದುಕೊಂಡು ಬರೆದುದಲ್ಲ. ಒಂದೆರಡು ಉದಾಹರಣೆಗಳನ್ನು ಕೊಡಬಹುದು.

೧. ಮಂಗಳೂರು ಕದಿರೆ ದೇವಾಲಯವು ಗಜಪೃಷ್ಠವೆಂಬುದಾಗಿ ಡಾ| ಸಾಲೆತ್ತೂರರವರು "ಹಿಸ್ಟರಿ ಆಫ್ ತುಳುವ" ಎಂಬ ಗ್ರಂಥದಲ್ಲಿ ಬರೆಯುತ್ತಾರೆ. ಕದಿರೆ ದೇವಾಲಯದ ಆಕಾರವೂ ಉಡುಪಿ ಅನಂತೇಶ್ವರ ದೇವಾಲಯದ ಆಕಾರವೂ ಒಂದೇ ಎಂಬುದಾಗಿ ಬರೆದು ಅವು ಆದಿಯಲ್ಲಿ ಬೌದ್ಧರ ವಿಹಾರಗಳಾಗಿದ್ದಿರಬೇಕು ಎಂಬುದು ಹುರುಳಿಲ್ಲದ ಮಾತು. ಪು. 384.

೨. ಕದಿರೆ ದೇವಾಲಯವು ಗಜಪೃಷ್ಠವೆಂದು ಸಾಲೆತ್ತೂರರು ಬರೆದಿರುವುದನ್ನು ಆಧರಿಸಿ ಇತರ ಸಂಶೋಧನಕಾರರೂ, ಬರಹಗಾರರೂ ಪುನರುಚ್ಚರಿಸಿದ್ದುಂಟು.

೩. ಉದ್ಯಾವರ ಗಣಪತಿ ದೇವಾಲಯದಲ್ಲಿ ಮೊದಲು ಶಿವವಿಗ್ರಹವಿತ್ತೆಂದು ಈ ಇತಿಹಾಸಕಾರರು ಹೇಳುವುದರಲ್ಲಿಯೂ ಅರ್ಥವಿಲ್ಲ.

೪. ಉಡುಪಿ ಅನಂತೇಶ್ವರ ದೇವಾಲಯದ ಲಕ್ಷಣಗಳೂ, ನಿಟ್ಟೂರಿನ ಸೋಮ ಲಿಂಗೇಶ್ವರನ ದೇವಾಲಯದ ಲಕ್ಷಣಗಳೂ ಒಂದೇ ಆಗಿವೆ ಎಂದು ಲೇಖಕರು ಬರೆಯುತ್ತಾರೆ. ಆದರೆ ಅದು ಸತ್ಯವಲ್ಲ. ಅನಂತೇಶ್ವರ ದೇವಾಲಯವು ಗಜಪೃಷ್ಠ ಆಕಾರದ್ದಾಗಿದೆ. ನಿಟ್ಟೂರಿನ ದೇವಳವು ಸಮಚತುರಸ್ರವಾಗಿದೆ.

5. ತುಳುನಾಡಿನ ವೈಷ್ಣವರು ಪಡೆದಿರುವ ದೇವಾಲಯಗಳೆಲ್ಲವೂ ಸ್ಥಾನಿಕರದ್ದಾಗಿತ್ತೆಂಬ ಡಾ| ಸಾಲೆತ್ತೂರರ ವಾದದಲ್ಲಿ ಬೇಳೆ ಬೇಯುವುದಿಲ್ಲ.

6. ನಾನು ನನ್ನ ತುಳುನಾಡು ಪುಸ್ತಕದಲ್ಲಿ ಡಾ| ಸಾಲೆತ್ತೂರರನ್ನು ಆಧರಿಸಿ ಮೂಲ ಆಧಾರ ಗ್ರಂಥಗಳನ್ನು ಪರಿಶೀಲನೆ ಮಾಡದೆ ಬರೆದಿದ್ದೇನೆ. ಆದರೆ ಮೂಲ ದಾಖಲೆಗಳನ್ನು ಪರಿಶೋಧಿಸಿದಾಗ ಅದು ಸರಿಯಲ್ಲ ಎಂದು ಒಪ್ಪಬೇಕಾಗುತ್ತದೆ.

7. ಸ್ಥಾನಿಕ ಶಿವಾರಾಧ್ಯ, ಸ್ಥಾನಿಕ ತ್ರಿಭುವನಕರ್ತಾರ, ಸ್ಥಾನಿಕ ಭಟ್ಟಾರಕ, ಸ್ಥಾನಿಕ ತೇಜೋನಿಧಿ ಪಂಡಿತ, ಎಂಬುದಾಗಿ ಕರ್ನಾಟಕ ಶಾಸನಗಳಲ್ಲಿ ಬರುವ ವ್ಯಕ್ತಿಗಳು ದೇವಸ್ಥಾನದ ಅಧಿಕಾರಿಗಳು ಮತ್ತು ಶಿವಭಕ್ತರು ಎಂಬುದರಲ್ಲಿ ಅನುಮಾನವಿಲ್ಲದಿದ್ದರೂ ಅವರು ಬ್ರಾಹ್ಮಣರಲ್ಲವೆಂಬುದನ್ನು ಗಮನಿಸಬೇಕು. ಅವರು ಶಿವಧರ್ಮ ನಿರತರಾದ ಕಾಳಾಮುಖ ತಪೋಧನರು.

8. "ಕ್ರಿಸ್ತಶಕ 1845ರ ವರೆಗೆ ಕನ್ನಡ ಜಿಲ್ಲೆಯ ಸಾಧಾರಣ ಎಲ್ಲಾ ದೇವಸ್ಥಾನಗಳ ಧರ್ಮಾಧಿಕಾರಿಗಳೂ ಸ್ಥಾನಿಕ ಬ್ರಾಹ್ಮಣರಾಗಿದ್ದರು" ಎಂಬ ತೀರ್ಮಾನಕ್ಕೆ ಆಧಾರಗಳು ಸಾಲವು.

9. ಡಾ| ಸಾಲೆತ್ತೂರವರು "ಸ್ಥಾನಿಕರು ದೇವಳದ ಅರ್ಚಕರೆಂದು ಅಭಿಪ್ರಾಯ ಪಡುತ್ತಾರೆ." ಆದರೆ ಇದು ಸರಿಯಾದ ಅಭಿಪ್ರಾಯವಲ್ಲ.

10. ಉಡುಪಿ ಅನಂತೇಶ್ವರ ಚಂದ್ರೇಶ್ವರ ದೇವಾಲಯಗಳು ಅನಂತನಾಥ, ಚಂದ್ರನಾಥ ಬಸದಿಗಳಾಗಿದ್ದವು ಎಂಬುದೂ ಬರೀ ಅನುಮಾನ. ಇದಕ್ಕೆ ಯಾವ ಆಧಾರಗಳೂ ದೊರೆತಿಲ್ಲ.

11. ಈ ಲೇಖನದಲ್ಲಿ ಸ್ಥಾನಿಕರ ಇಳಿಮುಖಕ್ಕೆ ಮಾಧ್ವರೇ ಕಾರಣರೆಂಬ ಅಭಿಪ್ರಾಯವನ್ನು ಉಂಟುಮಾಡುವ ಒಕ್ಕಣೆಗಳು ಸಮಂಜಸವಾಗಲಾರದು. (ಗುರುರಾಜ ಭಟ್ಟರು 1962ನೇ ಇಸವಿಯ ಭವ್ಯವಾಣಿಯಲ್ಲಿ ಕೆಲ ಲೇಖನಗಳನ್ನು ಬರೆದು ಪ್ರಕಟಿಸಿ ಇದೀಗ ಅದರ ವಿರುದ್ಧ 1966ನೇ ಇಸವಿಯ ಪುಸ್ತಕದಲ್ಲಿ ರಿಸರ್ಚ್ ಮಾಡಿ ಹೀಗೆ ಬರೆಯುತ್ತಾರೆ.)

12. "ಉಡುಪಿ ತಾಲೋಕು ಪಲಿಮಾರು ದೇವಸ್ಥಾನದ ಅರ್ಚಕರು ಸ್ಥಾನಿಕರೆಂದು 1401--1402ನೇ ಇಸವಿಯ ಹಾಳುಗೊಳಿಸಿದ ಶಾಸನವು ತಿಳಿಸುತ್ತದೆ.

ಅವರಲ್ಲಿ ಸ್ಥಾನಪತಿಯ ಹೆಸರು ಕಿತ್ತು ತೆಗೆದಿದೆ. ಶಾಸನವು ತೋರಿಸುವಂತೆ ಈ ದೇವಸ್ಥಾನವು ಆಗ ಶಿವಾಲಯವಾಗಿತ್ತು. ಸ್ಥಾನಿಕರಿಗೂ ಮಾಧ್ವರಿಗೂ ಆದ ಜಗಳದಲ್ಲಿ ಶಿವಲಿಂಗವನ್ನು ಕಿತ್ತು ಬಿಸಾಡಿ ವಿಷ್ಣು ಆಲಯವಾಗಿ ಮಾಡಿರಬೇಕು." (I. K. ಶ್ರೀನಿವಾಸ ರಾಯರು ಸ್ಥಾನಿಕ ಬ್ರಾಹ್ಮಣರ ಪುಸ್ತಕದಲ್ಲಿ P. 71 ಬರೆದಿರುತ್ತಾರೆ. ಅದರ ಮೇಲೆ ಭಟ್ಟರ ರಿಸರ್ಚ್ ಮುಂದೆ ಕೊಡಲಾಗುತ್ತದೆ.) ಆದರೆ ಇದರಲ್ಲಿ ಸತ್ಯತೆ ಕಂಡು ಬರುವುದಿಲ್ಲ. ಈಗಲೂ ಮಂಡಲಾಕಾರದ ಅತಿ ಅಪರೂಪವಾದ ದೇವಳದಲ್ಲಿ ಬಹಳ ಪ್ರಾಚೀನವಾದ 8 ವ 9 ನೂರು ವರ್ಷಗಳು ಆಗಬಹುದಾದ ಜನಾರ್ದನ ವಿಗ್ರಹ ಕಂಡು ಬರುತ್ತದೆ. ಈ ದೇವಳವು ಜೀರ್ಣವಾಗಿದೆ. ಮೇಲೆ ಹೇಳಿದ ಶಾಸನವು ಇರುವುದು ಈ ದೇವಸ್ಥಾನದಲ್ಲಿ. ಪಲಿಮಾರಿನಲ್ಲಿ ಪ್ರಮುಖವಾದ ಶಿವಾಲಯ ಒಂದು ಕಂಡುಬರುತ್ತಾ 8—9 ನೂರು ವರ್ಷಗಳ ಹಿಂದಿನ ದೇವಾಲಯವೆನ್ನಬಹುದು. ಈ ದೇವಸ್ಥಾನದ ಅರ್ಚಕರು ಸ್ಥಾನಿಕರು ಎಂದು ಶಾಸನದಲ್ಲಿ ಇಲ್ಲ. ಅರ್ಚಕರೂ, ಸ್ಥಾನಿಕರೂ ಉದ್ಯೋಗದಲ್ಲಿ ಒಂದೇ ಎಂಬ ಸಂದೇಹಾಸ್ಪದ ವಿಷಯವನ್ನು ಬಾರಕೂರಿನ ಕ್ರಿ. ಶಕ 1407ನೇ ಶಾಸನದ ಕುರಿತೂ ಮಾಡಿದ್ದಾರೆ.

13. "ದಕ್ಷಿಣ ಕನ್ನಡ ಜಿಲ್ಲೆಯ ಬಸ್ತಿಗಳೂ ಬ್ರಾಹ್ಮಣ ಅಧಿಕಾರಿಗಳಾದ ಸ್ಥಾನಿಕರ ಅಧೀನದೊಳಗಿತ್ತು, ಮತ್ತು ಅದರಲ್ಲಿಯ ದೇವರ ಪೂಜೆ ಮಾಡುವ ಅಧಿಕಾರವನ್ನು ಸ್ಥಾನಿಕರಿಗೆ ಒಪ್ಪಿಸಿ ಕೊಡೋಣಾಗಿಯದೆ ಎಂಬುದು ಕ್ರಿ. ಶ. 1586ನೇ ಕಾರ್ಕಳ ಚತುರ್ಮುಖ ಬಸದಿಯ ಶಾಸನದಿಂದ ತಿಳಿಯುತ್ತದೆ." ಎಂಬ ಲೇಖಕರ (ಶ್ರೀನಿವಾಸ ರಾಯರ) ನಿರ್ಧಾರದಲ್ಲಿ ಹುರುಳಿಲ್ಲ (ಅಂದರೆ ಶಾಸನದಲ್ಲಿರುವ ಸ್ಥಾನಿಕರೆಂದರೆ ದೇವಕಾರಿಗಳಾದ ತಾವೇ ಹೊರತು ಜೈನ, ಕಾಲಾಮುಖ, ಶ್ರೀವೈಷ್ಣವರು ಅಲ್ಲವೇ ಅಲ್ಲ ಎಂಬ ತಪ್ಪು ಕಲ್ಪನೆಯಿಂದ ಉಂಟಾದದ್ದು.)

14. ಎಲ್ಲ ಕಡೆಯ ಸ್ಥಾನಿಕರೆಂಬ ಉದ್ಯೋಗಸ್ಥರು ಉತ್ತಮ ವರ್ಗದ ಬ್ರಾಹ್ಮಣರೆಂಬ (ಪು. 70 ಸ್ಥಾ. ಬ್ರಾ.) ಅಂತಿಮ ನಿರ್ಧಾರ ಸಲ್ಲದು. ಕಾರಣ ಈ ಹಿಂದೆ ಹೇಳಿದಂತೆ ಬ್ರಾಹ್ಮಣೇತರರಾದ ಕಾಳಾಮುಖರೆಂಬ ಶೈವರು ಸ್ಥಾನಿಕರೂ ಇದ್ದಾರೆ.

15. ದೇವಸ್ಥಾನಗಳ ಮೂಲ ಮೂರ್ತಿಗಳ ಅಂಗಹೀನಕ್ಕೆ ಮಾಧ್ವರೇ ಕಾರಣರೆಂಬ ಅಂತಿಮ ನಿರ್ಧಾರವೂ ಯೋಗ್ಯವಲ್ಲ.

16. "ಕ್ರೋಡಾಶ್ರಮವೆಂದು ಕರೆಯುತ್ತಿದ್ದ ಮಲ್ಪೆಯಲ್ಲಿ ಮಲ್ಲಿಕಾರ್ಜುನ ಮೂರ್ತಿಯನ್ನು ಕೆರೆಗೆ ಬಿಸಾಡೋಣಾಗಿದೆ. ಆ ದೇವಸ್ಥಾನದಲ್ಲೀಗ ಶಂಕರನಾರಾ

ಯಣ ದೇವರ ಮೂರ್ತಿ ಕಂಡು ಬರುತ್ತದೆ, ಎಂಬುದಾಗಿ ಲೇಖಕರು ಅಭಿಪ್ರಾಯ ಪಡುತ್ತಾರೆ. ಇದು ನಿಜವಾಗಲಾರದು. ಕ್ರೋಡಾಶ್ರಮ ವೆಂಬ ಸ್ಥಳಕ್ಕೆ ಶಾಸನಗಳಲ್ಲಿ ಕೊಂಡವೂರು (ಕೊಡವೂರು) ಎಂದೂ ಇಲ್ಲಿಯ ದೇವರು ಶಂಕರನಾರಾಯಣನೆಂದೂ, ಮೂಡಿ ಬಂದ ದೇವರೆಂದೂ, ಶಾಸನ ಗಳು ಹೇಳುತ್ತವೆ. ಶಂಕರನಾರಾಯಣ ಲಿಂಗ ಮಾತ್ರವಲ್ಲದೆ ಮೂರ್ತಿ ಕೊಡವೂರಲ್ಲಿ ಇರುವುದಿಲ್ಲ.

17. (1) ಆಚಾರ್ಯ, (2) ಓಜ, (3) ಜೀಯಲು, (4) ರಾಜ ರಾಜಗುರು, (5) ಸಮಯ ಚಕ್ರವರ್ತಿ, (6) ಪಂಡಿತ, (7) ಅಂಣ, (8) ಅರಸ, (9) ಜೋಯಿಸ, (10) ಅಪ್ಪ, (11) ಅಯ್ಯ, (12) ತತ್ಪದ, (13) ಗುರು, (14) ಒಡೆಯ, (15) ಶಾಸ್ತ್ರಿ, ಹೀಗೆ ಕುಟುಂಬನಾಮ ಗಳಿಂದ ಬ್ರಾಮ್ಹಣರೆಂದು ನಿರ್ಧರಿಸಲು ಸಾಧ್ಯವಿಲ್ಲ. ಈ ಹೆಸರುಗಳು ಬ್ರಾಮ್ಹ ಣೇತರರಲ್ಲೂ ಬರಬಹುದು ಎಂಬುದು ಶಾಸನಗಳಿಂದ ವಿದಿತವಾಗುತ್ತದೆ.

ಈ ರೀತಿಯಾಗಿ ಪೂರ್ವೋಕ್ತಮಾತುಗಳಿಂದ ಪಾದೂರು ಗುರುರಾಜ ಭಟ್ಟರು ಮಾರ್ಮಿ ಕವಾಗಿ ವಿಮರ್ಶಿಸಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಯಾವ ವಿಷಯಗಳ ಕುರಿತೂ ವಿಚಾರ ಬೇಡ, ವಿಮರ್ಶೆ ಬೇಡ, ಸಂಶೋಧನೆ ಬೇಡ. ಕೇವಲ ಹತ್ತಿರ ಹೋಗಿ, ಕಣ್ಣು ತೆರೆದು ನೋಡಿದರೆ ಮಾತ್ರ ಸಾಕು, ತಿಳಿಯು ತ್ತದೆ. ಅಂಥಾ ವಿಷಯಗಳು ಅಂದರೆ ದೇವಸ್ಥಾನದೊಳಗೆ ಶಿವಲಿಂಗವಿರುತ್ತದೆಯೋ? ಮೂರ್ತಿಯೋ? ಶಿಖರವು ಗಜಪೃಷ್ಠವೋ? ಸಮಚತುರಸ್ರವೋ? ಇತ್ಯಾದಿ ಅದನ್ನೂ ಸಹ ಇದ್ದದ್ದು ಇದ್ದ ಹಾಗೆ ನೋಡಿ ಬರೆಯುವುದಿಲ್ಲ. ತಾನು ತಪ್ಪು ಬರೆದು ಇತರ ಸಂಶೋಧಕ ಬರಹಗಾರರಿಗೆ ಸಹ ತಪ್ಪುದಾರಿ ಹಿಡಿಯುವಂತೆ ತಮ್ಮ ಹುದ್ದೆ ಅಧಿಕಾರದ ದುರುಪಯೋಗ ಮಾಡಿಕೊಳ್ಳುತ್ತಾರೆ. ಅಂದ ಮೇಲೆ ಅರ್ಥಮರ್ಥ ಒಡೆದು ಚೂರಾದ ಶಾಸನಗಳನ್ನು ಏನು ಓದುತ್ತಾರೆ? ಏನು ಅರ್ಥಮಾಡುತ್ತಾರೆ? ಏನು ಬರೆಯುತ್ತಾರೆ? ಎಲ್ಲಾ ಮೋಸವೆಂತ ತಿಳಿಯಬೇಡವೆ? ಹಾಗೆ ತಿಳಿದರೆ ತಪ್ಪೇ? ಸಂಶೋಧಕರಾದ ಗುರುರಾಜ ಭಟ್ಟರೇ ಬರೆಯುತ್ತಾರೆ. "ಡಾ| ಸಾಲೆತ್ತೂರರನ್ನಾಧರಿಸಿ ನಾನು ಮಾತ್ರ ವಲ್ಲದೆ ಇನ್ನಿತರ ಸಂಶೋಧಕರೂ ಮೋಸ ಹೋಗಿದ್ದಾರೆ. ಅಂದ ಮೇಲೆ ಇನ್ನಿತರ ಸಾದಾ ಜನರು ಮೋಸ ಹೋಗುವುದರಲ್ಲಿ ಏನಾಶ್ಚರ್ಯ? ಡಾ| ಸಾಲೆತ್ತೂರರು ಲಂಡನ್ ತನಕ ಹೋಗಿ ಇಂಗ್ಲೀಷರು ಕಲಿಸಿಕೊಟ್ಟ ಇತಿಹಾಸ ಬರೆಯುವ ಕಲೆಯನ್ನು ಅಂದರೆ ಇತ್ಥಂಭೂತ ಸಂಗತಿಯನ್ನು ಬಚ್ಚಿಟ್ಟು, ವಸ್ತುಸ್ಥಿತಿಯನ್ನು ವಿಪರ್ಯಾಸ ಗೊಳಿಸಿ, ಪ್ರತಿಷ್ಠಿತರನ್ನು ನಿಂದಿಸಿ, ಧರ್ಮವನ್ನು ತೆಗಳಿ ತಮ್ಮ ಅಪೇಕ್ಷೆಯಂತೆ ಸುಸಂಗತ ವಾಗಿ ಸುಳ್ಳು ಸಂಗತಿಗಳನ್ನು ಬರೆದು, ಜನತೆಯನ್ನು ವಂಚಿಸುವ, ಇತಿಹಾಸ ಬರೆ ಯುವ ಕಲೆಯನ್ನು ಚಾ ಚೂ ತಪ್ಪದೆ ಅನುಸರಿಸಿದ್ದಾರೆ ಎಂದಾಯಿತು.

ಶ್ರೀ ಪಾದೂರು ಗುರುರಾಜ ಭಟ್ಟರೂ ಸಹ ಇತಿಹಾಸ ಬರೆಯುವ ಕಲೆಯನ್ನು

ಅಭ್ಯಾಸ ಮಾಡಿದವರೇ ಇದ್ದಾರೆ. ಆದುದರಿಂದ ಶ್ರೀಯುತರು ಶಿವಳ್ಳಿಯವರ ಪಕ್ಷ ಹಿಡಿದು ಶಿವಳ್ಳಿಯವರನ್ನು ಸಮರ್ಥಿಸಲು ಪೂರ್ವೋಕ್ತ ವಿಮರ್ಶೆ ಬರೆದರು ಎಂದು ತಿಳಿಯುವಂತಿಲ್ಲ. ಸದರಿಯವರು ಬರೆದ 1962ನೇ ಇಸವಿಯ ಭವ್ಯವಾಣಿಯ ಲೇಖಗಳು, ಮತ್ತು 1963ನೇ ಇಸವಿಯ ತುಳುನಾಡು ಪುಸ್ತಕ, ಇವುಗಳನ್ನೋದಿದರೆ ಸದರಿಯವರು ತಾನು ಸ್ವತಃ ಶಿವಳ್ಳಿಯವರಾದರೂ ಅದರ ಪರಿವೆ ಇಲ್ಲದೆ ವಿಮರ್ಶಕರೆಂಬ ಘನವೇಂಡೀ ಹಿಡಿದು ಸ್ಥಾನಿಕರ ಪಕ್ಷ ವಹಿಸಿ ಅವರ ಕಾರ್ಯಕ್ಕೆ ಅನುಗುಣವಾಗುವಂತೆ ಶಿವಳ್ಳಿಯವರನ್ನು ಅತ್ಯಂತ ಮನಸಾರೆ ಹೀಯಾಳಿಸಿ ಶಿವಳ್ಳಿಯವರ ಕಟು ವೈರಿಗಳಂತೆ ವರ್ತಿಸಿದ್ದಾರೆಂದು ತಿಳಿಯಲು ಅವಕಾಶವುಂಟು. ಅದಕ್ಕೆ ಅವರ 1966ನೇ ಇಸವಿಯ ಪುಸ್ತಕದ 61ನೇ ಪುಟದಲ್ಲಿ "ಈ ಲೇಖನದಲ್ಲಿ ಸ್ಥಾನಿಕರ ಇಳಿಮುಖಕ್ಕೆ ಮಾಧ್ವರೇ ಕಾರಣರೆಂಬ ಅಭಿಪ್ರಾಯ ಉಂಟುಮಾಡುವ ಒಕ್ಕಣೆಗಳು ಅಷ್ಟೊಂದು ಸಮಂಜಸವಾಗಲಾರದು" ಎಂಬುದೊಂದು ಉದಾಹರಣೆಯೇ ಸಾಕು. ಈ ಲೇಖನದಲ್ಲಿ ಅಂದರೆ 1962ನೇ ಭವ್ಯವಾಣಿ ಲೇಖನದಲ್ಲಿ ಸ್ಥಾನಿಕರ ಅವನತಿಗೆ ಮಾಧ್ವರೇ ಕಾರಣರೆಂಬುದನ್ನು ತಾನೇ ಬರೆದಿದ್ದೇನೆಂದು ಒಪ್ಪಿಕೊಂಡಂತೆ ಆಗಲಿಲ್ಲವೇ? ಇದು ಮಾತ್ರವಲ್ಲದೆ 1966ನೇ ಇಸವಿಯ ಪುಸ್ತಕದಲ್ಲಿ 63ನೇ ಪೇಜಿನಲ್ಲಿ "ಸ್ಟರಕ ಸಾಹೇಬರು ಸಂಗ್ರಹಿಸಿದ ಡಿಸ್ಟ್ರಿಕ್ ಮ್ಯಾನುವೇಲಿನಲ್ಲಿ ಸ್ಥಾನಿಕರ ಕುರಿತು ಬರೆದ ಸಂಗತಿಗಳು ಸ್ಥಾನಿಕರಿಗೆ ಅಪಮಾನಕರವೆಂದು ಗ್ರಹಿಸಿ ನಿಷ್ಕರ್ಷೆಗೆ ಅಯೋಗ್ಯವಾದುದರಿಂದ ಅವುಗಳನ್ನು ಚರ್ಚಿಸಿಲ್ಲ"ವೆನ್ನುತ್ತಾರೆ. ಆದರೆ ಥರಸ್ಟನ್ ದೊರೆಗಳು ಬರೆದ ಶಿವಳ್ಳಿ ಮಾಧ್ವರ ನಿಂದಾತ್ಮಕ ಸಂಗತಿಗಳನ್ನು ತುಳುನಾಡು ಪುಸ್ತಕದ ಹಲವು ಪುಟಗಳಲ್ಲಿ ಟೀಕಾ ಟೂಕಾ ಸಹಿತ ಬರೆದು ಪ್ರಕಟಿಸಲು ಗುರುರಾಜ ಭಟ್ಟರಿಗೆ ಯಾವ ಸಂಕೋಚವೂ ಆಗಲಿಲ್ಲ. ಏಕೆಂದರೆ ಭಟ್ಟರು ಸ್ಥಾನಿಕರ ಕುಂದುಕೊರತೆಗಳನ್ನು ನೀಗಿಸುವ ಮತ್ತು ಅವರ ಪ್ರತಿಷ್ಠೆ ಹೆಚ್ಚಿಸುವ ಜವಾಬ್ದಾರಿ ಹೊತ್ತಿದ್ದಾರೆಯಲ್ಲದೆ ಮಾಧ್ವಶಿವಳ್ಳಿಯವರದ್ದಲ್ಲ. ಮತ್ತು ಸ್ಥಾನಿಕರ ಸ್ಥಾನಮಾನಗಳು ಶಿವಳ್ಳಿ ಮಾಧ್ವರನ್ನು ನಿಂದಿಸುವುದರಿಂದಲೇ ಸಾಧ್ಯ ಮತ್ತು ಪ್ರಾಪ್ತವಾಗುತ್ತವೆ ಎಂದು ಗ್ರಹಿಸಿದರಿಂದಲೂ ಶಿವಳ್ಳಿಯವರ ನಿಂದೆಯು ಅವರ ಕರ್ತವ್ಯವೂ ಆಗಿತ್ತು. ಆದ್ದರಿಂದ ಶ್ರೀ ಗುರುರಾಜ ಭಟ್ಟರನ್ನೂ ಡಾ|| ಸಾಲೆತ್ತೂರಾದಿಗಳ ಸಾಲಿನ ಪ್ರತಿವಾದಿಗಳೆಂದೇ ಗ್ರಹಿಸಿ "ಪ್ರತಿವಾದಿಸ್ಖಲಿತಂನೋಪೇಕ್ಷಾಮರ್ಹತಿ"ಯೆಂತ ಬರೆಯಲಾಗಿದೆ. ಏವಂಚ ಹಿಂದಿನ ವಿವೇಚನೆಯಿಂದ ಮುಂದಿನ ನಿಷ್ಕರ್ಷೆಯಿಂದ ಪ್ರತಿವಾದಿ ಜನರ ಒಪ್ಪಿಗೆ ಮೇಲಿಂದ ಕೌಟಿಲ್ಯನ ಅರ್ಥಶಾಸ್ತ್ರದ ಸ್ಥಾನಿಕರಿಗೂ, ಶಾಸನಗಳ ಸ್ಥಾನಿಕರಿಗೂ, ಇವರಿಗೂ ಅಂದರೆ ದೇವಕಾರಿ ಸ್ಥಾನಿಕರಿಗೂ ಯಾವ ಬಾದರಾಯಣ ಸಂಬಂಧವೂ ಇರುವುದಿಲ್ಲ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅರ್ಥಶಾಸ್ತ್ರದ ಸ್ಥಾನಿಕರೆಂದರೆ ಜೈನರು, ಶಾಸನಗಳ ಸ್ಥಾನಿಕರೆಂದರೆ ಕಾಳಾಮುಖರು, ಎಂಬುದು ಗುರುರಾಜ ಭಟ್ಟರ ಮತ್ತು ಶ್ರೀನಿವಾಸ ರಾಯರ ಮಾತುಗಳ ಮೇಲಿಂದಲೇ ಸಿದ್ಧವಾಗುತ್ತದೆ. ಅಂದ ಮೇಲೆ ಈ ಸ್ಥಾನಿಕರು ಎಂದರೆ ಕೇರಳದಲ್ಲಿ

ಅಂಬಲವಾಸಿಗಳು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸ್ಥಾನಿಕರು, ಉತ್ತರ ಕನ್ನಡ ಜಿಲ್ಲೆಯಲ್ಲಿ ಪಾಟಾಳಿಗಳು. ದೇವಕಾರಿಗಳು ಎಂದರ್ಥ. ಇವರು ಸಹ್ಯಾದ್ರಿಖಂಡದ 18-19 ಅಧ್ಯಾಯದಲ್ಲಿ ಹೇಳಿದಂತೆ ದಾಸೀ ಪುತ್ರರು. ಅನುಲೋಮ ಜಾತಿಯಾದ್ದರಿಂದ ಜನಿವಾರ ಉಂಟು. ಪಂಕ್ತಿಬಾಹಿರರು. ದೇವಸ್ಥಾನದಲ್ಲಿ ಎಂಜಲು ಗೋಮಯ ಮಾಡುವುದು. ಛತ್ರಚಾಮರಗಳನ್ನು ಹಿಡಿಯುವುದು. ಇದೇ ಮೊದಲಾದ ದೇವಕಾರಿ ಕೆಲಸ ನಿರ್ವಿಚಾರ, ಇವತ್ತಿನ ವರೆಗೆ ಮಾಡುತ್ತಿರುವುದನ್ನು ನಾವು ಕಾಣುತ್ತಾ ಇದ್ದೇವೆ. ಪೂರ್ವೋಕ್ತ ಪ್ರಕಾರ ಶಾಸ್ತ್ರೋಕ್ತವಾಗಿಯೂ ಇದೆ. ಆದುದರಿಂದ ಸ್ಥಾನಿಕರ ಈ ಪ್ರವೃತ್ತಿಯು (ನಡತೆಯು), "ಶಾಸ್ತ್ರಾರ್ಥಯುಕ್ತೋಽನುಭವಃ ಪ್ರಮಾಣಂತೂತ್ತಮಂ ಮತಂ" ಎಂಬ ಪ್ರಮಾಣ ವಾಕ್ಯದಂತೆ ಶಾಸ್ತ್ರ ಮತ್ತು ಅನುಭವ ಎಂಬ 2 ಪ್ರಮಾಣಗಳಿಂದ ಅಬಾಧಿತವಾಗುತ್ತದೆ.

ಗುರುರಾಜ ಭಟ್ಟರು ಶಾಸನಗಳ ಆಧಾರದ ಮೇಲಿಂದ ಇವರನ್ನು ಪಾದಮೂಲಿಗಳೆಂದೂ ಕರೆದಿದ್ದಾರೆ. ದೇವರ ಪಾದ ಮೂಲದಲ್ಲೇ ಇರುತ್ತಿದ್ದುದರಿಂದ ಈ ಹೆಸರು ಸಮಂಜಸವಾಗುತ್ತದೆ. (ಪಾದಮೂಲಿ ಶಬ್ದದ ತದ್ಭವವೇ ಮೊಯಿಲಿ ಎಂಬ ಶಬ್ದ ಎಂಬ ಒಂದು ವಾದವೂ ಉಂಟು.) ಅಂಬಲವಾಸಿಗಳೆಂದರೂ ಅದೇ ಅರ್ಥ. ದೇವಸ್ಥಾನದಿಂದಲೇ ಉಪಜೀವಿತರಾಗಿರುವುದರಿಂದ ಸ್ಥಾನಿಕರೂ ಹೌದು. ಬಹುಕಾಲದಿಂದಲೂ ಈ ಹೆಸರು ಜಾತಿವಾಚಕವಾಗಿಯೇ ಇರುತ್ತಾ ಇತ್ತು. ಈಗಲೂ ಹಾಗೆಯೇ ಇದೆ. ಸ್ಟರಕ್ ಸಾಹೇಬರು ಎನ್‌ಕ್ವಾಯರಿ ನಡೆಯಿಸಿ ಡಿಸ್ಟ್ರಿಕ್ಟ್ ಮ್ಯಾನ್ಯುವೇಲ್‌ನಲ್ಲಿ ಸ್ಥಾನಿಕ ಜಾತಿಯವರೆಂದು ಬರೆದಿರುವುದೂ ನಿಜ. ಅಂದರೆ 1870ನೇ ಇಸವಿ ವರೇಗೆ ಇವರು ಸ್ಥಾನಿಕರಾಗಿಯೇ ಇರುತ್ತಿದ್ದರು ಎಂಬುದೂ ನಿಜ. ಅದರಲ್ಲಿ ತೃಪ್ತಿಯೂ ಇತ್ತು. ಶಿವಳ್ಳಿಯವರನ್ನು ಗುರುಗಳೆಂದು ಭಾವಿಸುತ್ತಲೂ ಇದ್ದರು. ತಮ್ಮ ಮದುವೆ ಉಪನಯನಾದಿ ಕಾರ್ಯಗಳನ್ನು ಶಿವಳ್ಳಿಯವರ ಕಡೆಯಿಂದ ಮಾಡಿಸಿಕೊಳ್ಳುತ್ತಲೂ ಇರುತ್ತಿದ್ದರು. ಆದರೆ 1870ನೇ ಇಸವಿ ನಂತರ ಒಂದು ತುಫಾನು ಗಾಳಿ ಬೀಸಿ ಎಲ್ಲವೂ ಅಸ್ತವ್ಯಸ್ತವಾಯಿತು. ಹಿಂದೆ ಹೇಳಿದಂತೆ 1870ನೇ ಇಸವಿ ವರೇಗೆ ಸ್ಥಾನಿಕರು ತಮ್ಮದೇ ಆದ ಜಾತಿಯಾಗಿ ಕೇರಳದ ಅಂಬಲವಾಸಿಗಳಂತ ಇದ್ದವರು 1872ನೇ ಇಸವಿಯಿಂದ ತಮ್ಮನ್ನು ಸ್ಥಾನಿಕ ಬ್ರಾಹ್ಮಣರೆಂದು ಹೇಳಿಕೊಳ್ಳಲಾರಂಭಿಸಿದರು. ತಾರೀಕು 12—6—1872ರಲ್ಲಿ ವಿಟ್ಲ ರಿಜಿಸ್ಟ್ರಿ ಆಫೀಸಿನಲ್ಲಿ ರಿಜಿಸ್ಟ್ರಿ ಆಗುವ ದಸ್ತಾವೇಜಿನಲ್ಲಿ ಸ್ಥಾನಿಕ ಬ್ರಾಹ್ಮಣರೆಂದು ಬರೆದು ಮುಹೂರ್ತಮಾಡಿ ಪ್ರಚಾರ ಶುರುವಾಯಿತು.

ಅದರಲ್ಲಿಯೂ ತೃಪ್ತಿಯಿಲ್ಲದೆ ಕೊನೆಗೆ ತಾ. 6—3—1884ನೇ ಇಸವಿಯಲ್ಲಿ ಸರಕಾರಿ ಗಜೇಟಿನಲ್ಲಿ ಪ್ರಚುರಪಡಿಸಿ ಶಿವಳ್ಳಿ ಬ್ರಾಹ್ಮಣರೆಂದು ಹೇಳಿಕೊಳ್ಳಲಾರಂಭಿಸಿದರು. ತಾ. 8—1—1924ರಲ್ಲಿ ಶೃಂಗೇರಿ ಮಠದ ರಾಯಸ ಹೊರಡಿಸಿ ಶೃಂಗೇರಿ ಮಠದ ಶಿಷ್ಯರಾದರು. ಮತ್ತೆ ಈಗ ಕೌಟಿಲ್ಯನ ಅರ್ಥಶಾಸ್ತ್ರದ ಜಿಲ್ಲಾ ಅಧಿಕಾರಿ

ಆಗಿದ್ದಾರೆ. ಮತ್ತು ಪುನಶ್ಚ ಶಾಸನದ ಉತ್ತಮೋತ್ತಮ ಮೇಲ್ತರಗತಿಯ ಬ್ರಾಮ್ಹಣ ರಾಗಿದ್ದಾರೆ. ಹೀಗೆ 1870 ರಿಂದ 1970ರ ವರೇಗೆ ಒಂದು ಶತಕದಲ್ಲಿ (1) ಸ್ಥಾನಿಕ, (2) ಸ್ಥಾನಿಕ ಬ್ರಾಮ್ಹಣ, (3) ಶಿವಬ್ರಾಮ್ಹಣ, (4) ಶೃಂಗೇರಿ ಮಠದ ಶಿಷ್ಯ, (5) ಜಿಲ್ಲಾಧಿಕಾರಿ, (6) ಶಾಸನದ ಧರ್ಮಾಧಿಕಾರಿ, (7) ಉತ್ತಮೋತ್ತಮ ಬ್ರಾಮ್ಹಣ ಎಂದು ಪ್ರಚಾರ ನಡೆದಿದೆ.

ಆದರೆ ಈ ಹೊತ್ತಿನ ವರೇಗೆ ಶೃಂಗೇರಿ ಪೀಠಾಧಿಪತಿಗಳಾಗಲಿ, ಸ್ಥಾನಿಕ ಸಂಗಡ ದವರಾಗಲಿ, ಸ್ಥಾನಿಕರ ಪರ ವಕಾಲತು ಹಿಡಿದು ಬರೆದವರಾಗಲಿ, ಮತ್ತೆ ಯಾರೇ ಬೇರೆಯವರಾಗಲಿ ಸಹ್ಯಾದ್ರಿ ಖಂಡೋಕ್ತ ಸ್ಥಾನಿಕರ ಉತ್ಪತ್ತಿ, (ಪಾಟಾಳಿ ಉತ್ಪತ್ತಿ), ಸರಿಯಲ್ಲ. ಇವರ ಉತ್ಪತ್ತಿ ಹೀಗಿದೆ. ಇವರು ಪರಿಶುದ್ಧ ಪಾಂಕ್ತೇಯ ಬ್ರಾಮ್ಹಣರು ಎಂದು ದಾಖಲೆಗಳನ್ನು ಕೊಟ್ಟು ರುಜುವಾತು ಮಾಡಿರುತ್ತಾರೋ? ಇನ್ನಾದರೂ ರುಜುವಾತು ಮಾಡುತ್ತಾರೋ? ಎದೆತಟ್ಟಿ ಹೇಳಿದವರಿಲ್ಲ. ಸರಿಯಾಗಿ ಸಮರ್ಥನೆ ಮಾಡಿದವರಿಲ್ಲ. ಪ್ರತ್ಯುತ ಶ್ರೀಸುಬ್ರಹ್ಮಣ್ಯ ಮಠದ ವಿದ್ಯಾಪೂರ್ಣತೀರ್ಥರ ಕಾಲದ (ಸನ್ 1881 ಇಸ್ವಿ ಯಲ್ಲಿ) ಸ್ಥಾನಿಕರು ಬ್ರಾಮ್ಹಣರಲ್ಲವೆಂದು ಮುನ್ಸಿಫ್ ಕೋರ್ಟು ಡಿಕ್ರಿ ಇದೆ. ಮುಂದೆ ಅಪೀಲು ಮಾಡಿದಾಗ ಡಿಸ್ಟ್ರಿಕ್ಟ್ ಕೋರ್ಟಿನಲ್ಲಿ ಸಹ ತೀರ್ಪು ಕಾಯಂ ಆಗಿದೆ.:ಏತದ್ದೇಶ ನಿವಾಸಿಗಳಾದ ಕೋಟ, ಕೋಟೇಶ್ವರ, ಹವೀಕ, ಶಿವಳ್ಳಿಯವರು ಯಾರೂ ಅಧಿಕೃತ ವಾಗಿ ಹವ್ಯಕವ್ಯಗಳಲ್ಲಿ ಸ್ಥಾನಿಕರನ್ನು ಪಂಕ್ತಿಯಲ್ಲಿ ಸೇರಿಸಿಕೊಂಡಿಲ್ಲ. ಸೇರಿಸಿಕೊಳ್ಳು ವುದೂ ಇಲ್ಲ. ಹೋಟೆಲುಗಳಲ್ಲಿ, ಟೀಪಾರ್ಟಿಗಳಲ್ಲಿ ಎಲ್ಲವರ ಒಟ್ಟಿಗೆ ತಿಂದಿರಬಹುದು. ಗೊತ್ತಾಗದೆ ಮಹಾ ಪಂಕ್ತಿಯಲ್ಲಿ ಉಂಡಿರಬಹುದು. ಅದು ಅಧಿಕೃತವಲ್ಲ. ಅದು ತುಡುಗುತನ. ಅದು ಪದ್ಧತಿ ಆಗದು. ಇನ್ನು ಕೆಲವರು ಪರಿಶುದ್ಧ ಬ್ರಾಮ್ಹಣರೆಂದು ಗ್ರಹಿಸಿ ಶರೀರ ಸಂಬಂಧ ಮಾಡಿಕೊಂಡಿರಲೂಬಹುದು. ಉದ್ಧಟತನದಿಂದ ಮಾಡಿದ ಅಪಕೃತ್ಯಗಳು ಪ್ರಾಮಾಣಿಕ ಶಿಷ್ಟಾಚಾರ ಅಲ್ಲ. ಪರಂಪರೆಯಾಗಿ ಬ್ರಾಮ್ಹಣರ ಸಾಪಂಕ್ತ್ಯ ಇಲ್ಲ. ಒಂದು ವೇಳೆ ಸ್ವಾಭಾವಿಕವಾಗಿ ಪಾಂಕ್ತೇಯ ಬ್ರಾಮ್ಹಣರೇ ಆಗಿದ್ದರೆ ಶೃಂಗೇರಿ ಮಠದಿಂದ ರಾಯಸ ತರಿಸಿಕೊಳ್ಳಬೇಕೋ? ರಾಯಸ ಬಂದ ಮೇಲೆ ಯಾದರೂ ಮಾಧ್ವರನ್ನು ಬಿಡಿ, ಹವೀಕರು, ಕೋಟದವರು ಸ್ಮಾರ್ತರಾದರೂ ಸಾಪಂಕ್ತ್ಯ ಕೊಟ್ಟಿದ್ದಾರೊ? ಶೃಂಗೇರಿ ಮಠದವರೇ ಆಗಲಿ ತಮ್ಮ ಮಠದಲ್ಲಿ ಅರ್ಚನಾದಿ ಕಾರ್ಯಗಳಲ್ಲಿ ಸೇರಿಸಿ ಕೊಂಡು ಮೇಲ್ಪಂಕ್ತಿ ಹಾಕಿಕೊಡಲಿ. ಶ್ರೀನಿವಾಸ ರಾಯರ ಸ್ಥಾ. ಬ್ರಾ. ಪು. 16ರಲ್ಲಿ ಶೃಂಗೇರಿ ಮಠದ ರಾಯಸ ಸಾಪಂಕ್ತ್ಯದ ಸಲು ವಾಗಿ ತರಿಸಿದ್ದು ಎಂತ ಉಕ್ತವಾಗಿದೆ.

ಹವೀಕ-ಕೋಟದವರು ಸ್ಮಾರ್ತರಾದರೂ ಶಿವಳ್ಳಿಯವರು ಮಾಧ್ವ ವೈಷ್ಣವ ರಾದರೂ ಸಪಂಕ್ತಿ, ವಿವಾಹ, ಇವುಗಳ ಬಗ್ಗೆ ಯಾವ ಮಠದಿಂದಾಗಲಿ ರಾಯಸ ತರುತ್ತಾ ಇದ್ದಾರೋ? ತರಿಸಬೇಕೋ? ಸಹಜ ಕೃತ್ರಿಮಗಳೊಳಗೆ ಇಷ್ಟೇ ಪ್ರಭೇದ ಅಂತ ತಿಳಿಯತಕ್ಕದ್ದು. ಕೆಲವು ಜನರಿಗೆ ಸ್ಥಾನಿಕ ಬ್ರಾಮ್ಹಣರು ಉತ್ತಮ ಬ್ರಾಮ್ಹಣರಾಗ

ಬೇಕೆಂಬ ಅಪೇಕ್ಷೆ ಇದೆಯೆಂಬುದು ನಿಜ. ಅದ್ವೈತ ಮತದಲ್ಲಿ ಬ್ರಮ್ಹನಲ್ಲಿಯ ಸಾರ್ವಜ್ಞತ್ವಾದಿಗಳೂ ಜೀವನಲ್ಲಿರುವ ಪಾರತಂತ್ರ್ಯಾದಿಗಳೂ ಕಳೆದುಹೋಗಿ ಚೇತನ ಒಂದು ಎಂತ ಆತ್ಮಸಮಾಧಾನ ಮಾಡಿಕೊಂಡಂತೆ ಬ್ರಾಮ್ಹಣರಲ್ಲಿಯ ಬ್ರಾಮ್ಹಣ್ಯ ವನ್ನೂ ಸ್ಥಾನಿಕರಲ್ಲಿಯ ಸ್ಥಾನಿಕತ್ವವನ್ನೂ ಮರೆತುಬಿಟ್ಟು ಮನುಷ್ಯ ಮನುಷ್ಯ ಒಂದು ಎಂದು ಸಮಾಧಾನ ಪಡಬಹುದು-—ಅಷ್ಟೇ.

ಆಚಾರಿಗಳು ಅಂದರೆ ಬಡಿಗರು ಬ್ರಾಮ್ಹಣರೆಂದೂ ಅವರಿಗೆ ಬ್ರಮ್ಹಕರ್ಮದಲ್ಲಿ ಅಧಿಕಾರವಿದೆಯೆಂದೂ ಕೋರ್ಟು ಡಿಕ್ರಿ ಇದೆ. ಶೃಂಗೇರಿ ಮಠದ ರಾಯಸವಿದೆ. ಮೊಕದ್ದಮೆ ನಂಬ್ರ 205/1818 ಚಿತ್ತೂರ ಜಿಲ್ಲಾ ಕೋರ್ಟಿನಲ್ಲಿ ದಾವೆ ಹಣ ರೂ. 550—00 ಕೋರ್ಟು ಖರ್ಚು ರೂ. 91--75 ಒಟ್ಟು ಸೇರಿ 641—75ಕ್ಕೆ ತಾ. 15-12-1818ರಲ್ಲಿ ಡಿಕ್ರಿ ಆಗಿದೆ. "ವಿಶ್ವಕರ್ಮ ವಂಶ ಪಾಂಚಾಲ ಬ್ರಾಮ್ಹ ಣರುಗಳಿಗೆ ಬ್ರಮ್ಹಕರ್ಮ ಮಾಡಲಿಕ್ಕೆ ಅಧಿಕಾರವಿದೆ. ಮತ್ತು ಪ್ರತಿವಾದಿಗಳು ಈ ವಿಷಯದಲ್ಲಿ ಹಸ್ತಕ್ಷೇಪ ಮಾಡಬಾರದು." 1820ರಲ್ಲಿ ಮದ್ರಾಸು ಹೈಕೋರ್ಟಿನಲ್ಲಿ ಅಪೀಲು ಮಾಡಿದಾಗ ಕೆಳಗಿನ ಕೋರ್ಟು ಹುಕುಂ ಸನ್ 1820ರಲ್ಲಿ ಕಾಯಂ ಆಗಿದೆ. ಶೃಂಗೇರಿ ಪೀಠಾಧೀಶ್ವರ "ಅಭಿನವ ವಿದ್ಯಾ ನರಸಿಂಹ ಭಾರತೀ"ಯವರ ರಾಯಸವಿದೆ. ಅಂದಮೇಲೆ ಸ್ಥಾನಿಕರು ಆಚಾರಿಗಳನ್ನು ಕರಕೊಂಡು ಏಕಪಂಕ್ತಿಯಲ್ಲಿ ಊಟ ಮಾಡು ತ್ತಾರೆಯೋ? ವಿವಾಹ ಸಂಬಂಧ ಇಟ್ಟುಕೊಳ್ಳುತ್ತಾರೆಯೋ? ಮೊದಲು ಬಡಿಗರನ್ನು ಸ್ಥಾನಿಕರು ಕೂಡಿಕೊಳ್ಳಲಿ—ಆ ಮೇಲೆ ಸ್ಥಾನಿಕರನ್ನು ಕರೆದುಕೊಳ್ಳೋಣವಂತೆ.

ಬ್ರಮ್ಹವೈವರ್ತ ಅ. 21 ಶ್ಲೋಕ 20.

"ವಿಶ್ವಕರ್ಮಾ ಚ ಶೂದ್ರಾಯಾಂ ವೀರ್ಯಾಧಾನಂ ಚಕಾರ ಸಃ |
ತತೋ ಬಭೂವುಃ ಪುತ್ರಾಶ್ಚ ನವೈತೇ ಶಿಲ್ಪಕಾರಿಣಃ
ಮಾಲಾಕಾರಃ ಕುಂಭಕಾರಃ ಕಂಸಕಾರಃ ಕುವಿಂದಕಃ
ಅಶ್ಮಕಾರಃ ಶಂಖಕಾರಃ ಷಡೇತೇ ಶಿಲ್ಪಿನಾಂ ವರಾಃ
ಸೂತ್ರಕಾರಃ ಚಿತ್ರಕಾರಃ ಸ್ವರ್ಣಕಾರಃ ತಥೈವ ಚ"

ಈ ಪುರಾಣದ ವಾಕ್ಯದ ಪ್ರಕಾರ ಬಡಗಿಯವರು ಶೂದ್ರಸ್ತ್ರೀಯರ ಮಕ್ಕಳು ಅಂತ ನಿರ್ದೇಶವಿದೆ. ಅದರಂತೆ ನಡತೆಯೂ ಇದೆ. ಅವರೊಳಗಿನ ಮಾಲೆಯವರು ಸ್ಥಾನಿಕರೆಂದುಕೊಂಡರೆ ತಮ್ಮ ಪಂಗಡಕ್ಕೆ ಅಪಮಾನವಾಗುತ್ತದೆಯೆನ್ನುತ್ತಾರೆ ಶ್ರೀನಿ ವಾಸರಾಯರು. ಡಿಸ್ಟ್ರಿಕ್ಟ ಮೆನ್ಯುವೆಲಿನಲ್ಲಿ ಮಾಲೆಯವರು ಸ್ಥಾನಿಕರೆಂದು ಬರೆಯಬಾ ರದೆಂದು ಸಾಧಿಸಿದರು ಎನ್ನುತ್ತಾರೆ. ಕೊಡಗು ಕಮಿಶನರಿಗೆ "ಮಾಲೆಯವರು ತಮ್ಮನ್ನು ಸ್ಥಾನಿಕರೆಂದು ಹೇಳಿಕೊಳ್ಳಬಾರದೆಂದು ಹುಕುಂ ಆಗುವಂತೆ ಅರ್ಜಿ ಮಾಡಿ ಸಿದರು ಎಂದು ಹೇಳುತ್ತಾರೆ. ಆದರೆ ಅರ್ಜಿ ತಿರಸ್ಕೃತ (ರಿಜಕ್ಟ) ಆಯಿತು. ಮಾಲೆ ಯವರನ್ನು ಸ್ಥಾನಿಕರೆಂದೇ ಡಿಸ್ಟ್ರಿಕ್ಟ ಮ್ಯಾನುವೇಲಿನಲ್ಲಿ ಬರೆಯಲಾಯಿತು. ತಾವು ಮಾಲೆಯವರ ಕೂಡ ಸೇರಲು ಒಪ್ಪುವುದಿಲ್ಲ. ಅಂದಮೇಲೆ ಶಿವಳ್ಳಿಯವರ ಮೇಲೆ

ಕೋಪವೇಕೆ? ತಮಗೆ ಯಾವುದು ಬೇಡ? ಅವನ್ನು ಇನ್ನೊಬ್ಬರ ಮೇಲೆ ಹೊರಿಸ ಬಾರದು. ಇದಿಷ್ಟು ತಿಳಿಯಬಾರದೇ? ಅಂತೂ ಶಿವಳ್ಳಿಯವರ ದ್ವೇಷ ಸಲ್ಲದು.

**ಶಾಸನಗಳು**

1966ನೇ ಪುಸ್ತಕದಲ್ಲಿ ಶ್ರೀ ಗುರುರಾಜ ಭಟ್ಟರು ಬರೆಯುತ್ತಾರೇನಂದರೆ ತುಳು ನಾಡಿನ ಶಾಸನಗಳನ್ನು ಪರಿಶೀಲಿಸಿದರೆ "ಸ್ಥಾನ" ಪದವು ರಾಜಕೀಯ ಘಟಕವನ್ನೇ ನಿರ್ದೇಶಿಸುತ್ತಿತ್ತು ಎಂಬುದು ಖಚಿತವಾಗುತ್ತದೆ. ಕೆಲವು ದೃಷ್ಟಾಂತಗಳನ್ನು ಗಮನಿಸ ಬಹುದು.

1. ಉಡುಪಿಯ ಸರೋವರದ ಹತ್ತಿರ ದೊರಕಿದ ಶಾ. ಶ. 1397ನೇ ಶಿಲಾ ಲೇಖನವು ಎಲ್ಲೂರು ಕುಂದ ಹೆಗ್ಗಡೆ, ಕಾಪು ಮರ್ದ ಹೆಗ್ಗಡೆ, ಸೀಮಂತೂರು ಕಿನ್ನಿಕ ಸೇವಿತ, ಯರಡುನಾಡು ಚೌಟರು, ಈ ನಾಲ್ವರೊಳಗೆ ಆದ ಒಪ್ಪಂದವನ್ನು ತಿಳಿಸುತ್ತಾ ಅವರ ಆಡಳಿತ ಕ್ಷೇತ್ರವನ್ನು "ಸ್ಥಾನಗಳು" ಎಂಬುದಾಗಿ ಉಲ್ಲೇಖಿಸುತ್ತದೆ.

2. ಉಡುಪಿ ತಾಲೂಕಿನ ಕಾಪು ಜನಾರ್ದನ ದೇವಸ್ಥಾನದಲ್ಲಿ ದೊರಕಿದ ಕ್ರಿ. ಶಕ 1499ನೇ ಶಾಸನವು ಕುಂದ ಹೆಗ್ಗಡೆ, ಮತ್ತು ತಿರುಮಲೆ ಅರಸನಾದ ಮರ್ದ ಹೆಗ್ಗಡೆ ಇವರೊಳಗಿನ ರಾಜಕೀಯ ಒಪ್ಪಂದವನ್ನು ತಿಳಿಸುತ್ತದೆ. ಈ ದಾಖಲೆಯಂತೆ ಇವರೀರ್ವರ ರಾಜ್ಯಗಳು ಸ್ಥಾನಗಳೆಂದು ನಮೂದಿಸಲ್ಪಟ್ಟಿವೆ.

3. ಕಾರ್ಕಳ ತಾಲೂಕು ಪೈಕಿ ಪುತ್ತಿಗೆ ಸೋಮನಾಥ ದೇವಾಲಯದ ಇದಿರಲ್ಲಿ ದೊರಕಿದ ಶಾಸನವೊಂದು ಎಲ್ಲೂರು ಕುಂದ ಹೆಗ್ಗಡೆ, ಪುತ್ತಿಗೆ ತಿರುಮಲರಾಯ ಚೌಟರು, ಅಯಿಕಳದ ತಿರುಮಲರಸನಾದ ಕಿನ್ನಿಕ ಹೆಗ್ಗಡೆ ಇವರೊಳಗಿನ ಒಪ್ಪಂದ ವನ್ನು ಉಲ್ಲೇಖಿಸಿ ಆ ಮೂವರು ಅರಸರ ಕೈಕೆಳಗಿನ ಕ್ಷೇತ್ರವನ್ನು "ಸ್ಥಾನ"ಗಳೆಂಬು ದಾಗಿ ನಮೂದಿಸಿದೆ.

ಈ ಸ್ಥಾನಗಳ ಸಂಪೂರ್ಣ ಅಧಿಕಾರಿಯು ಹೆಗ್ಗಡೆ, ಸಾವಂತ, ಚೌಟ, ಬಂಗ, ಎಂಬುದಾಗಿ ನಾಮಧೇಯವುಳ್ಳ ತುಂಡು ಅರಸರು. ನಮ್ಮ ದೇಶದ ಪ್ರಾಚೀನ ಇತಿ ಹಾಸವು ತೋರಿಸಿ ಕೊಡುವಂತೆ ರಾಜಕೀಯ ಕ್ಷೇತ್ರದಲ್ಲಿ ಸೀಮೆನಾಡಿನ ಅಧಿಕಾರಿ ಆಗಿ (ದೇವಕಾರಿ) ಸ್ಥಾನಿಕರು, (ಅಧಿಕಾರಿ) ಸ್ಥಾನಿಕರಾಗಿ ಇದ್ದರೋ? ಇಲ್ಲವೋ? ಎಂಬ ವಿಷಯ ಚರ್ಚಾಸ್ಪದವೇ? ಇದಕ್ಕೆ ನಿರ್ದಿಷ್ಟವಾದ ಉದಾಹರಣೆಗಳು ದೊರ ಕುವುದಿಲ್ಲ.

ಗುರುರಾಜ ಭಟ್ಟರ ಈ ಮೇಲಿನ ವಿಮರ್ಶೆಯಿಂದ ಕೌಟಿಲ್ಯನ ಅರ್ಥಶಾಸ್ತ್ರದ ಜಿಲ್ಲಾ ಅಧಿಕಾರಿ ಸ್ಥಾನಿಕ ಎಂಬವರು ತಾವೇ ಎಂದೂ, ಹಾಗೆ ಅಧಿಕೃತರಾಗಿ ಪಾಟಲೀ ಪುತ್ರದಿಂದ ಬಂದು ನೆಲೆಸಿದ್ದೇವೆ ಎಂದೂ ಶ್ರೀನಿವಾಸ ರಾಯರು ಹಗಲು ಕನಸು ಕಾಣು ತ್ತಾರಲ್ಲದೆ ಮತ್ತೇನೂ ಅರ್ಥ ಇರುವುದಿಲ್ಲ. ತಮ್ಮ ಪಾಟಾಳೀ ನಾಮಧೇಯಕ್ಕೂ,

ಪಾಟಲೀಪುತ್ರ ಶಬ್ದಕ್ಕೂ ತೊಳಕು ಹಾಕುವುದು ಹಾಸ್ಯಾಸ್ಪದ. ಪಠೇಲನೆಂಬ ಗ್ರಾಮಾಧಿಕಾರಿಯೂ ಪಾಟಲೀಪುತ್ರದಿಂದ ಬಂದವನಾಗಬೇಕಾದೀತಲ್ಲವೇ?

ಸ್ಥಾನೆ ನಿಯುಕ್ತ:—ರಾಜಕೀಯ ಕ್ಷೇತ್ರದಲ್ಲಿ ನಿಯುಕ್ತರು—ಎಂಬ ಅರ್ಥದ ಸ್ಥಾನಿಕ ಶಬ್ದವು ಜೈನರನ್ನು ತಿಳಿಸುತ್ತದೆ ಎಂದು ಈ ಹಿಂದಿನ ವಿಮರ್ಶೆಯಿಂದ ನಿರ್ಣೀತವಾಯಿತು.

ಸ್ಥಾ. ಬ್ರಾ. P. 12ರಲ್ಲಿ "ಹಿಂದೂ ರಾಜರುಗಳ ಕಾಲದಲ್ಲಿ ಅವರ ಸರಕಾರದವರೇ ದೇವಸ್ಥಾನಗಳ ಆಡಳಿತೆ ನೋಡುತ್ತಿದ್ದಂತೆ ಬ್ರಿಟಿಷ್ ಸರಕಾರವು ಸ್ಥಾಪನೆಯಾದಂದಿನಿಂದ 1845ರ ವರೆಗೆ ಬ್ರಿಟಿಷ್ ಸರಕಾರದವರೇ ಸಾರ್ವಜನಿಕ ದೇವಾಲಯಗಳ ಆಡಳಿತೆಯನ್ನು ನೋಡುತ್ತಿದ್ದರೆಂದು ಸ್ಪಷ್ಟವಾಗುತ್ತದೆ" ಎಂಬ ಉಲ್ಲೇಕವಿದೆ. ಇದರಿಂದ ದೇವಸ್ಥಾನದ ಅಧಿಕಾರಿಗಳು ಕೂಡಾ ಹಿಂದೂ ರಾಜರೇ ಆಗಿದ್ದರು. ದೇವಕಾರಿ ಸ್ಥಾನಿಕರಲ್ಲ. ಕ್ರಿ. ಶ. 1845ರ ವರೆಗೆ ಕನ್ನಡ ಜಿಲ್ಲೆಯ ಸಾಧಾರಣ ಎಲ್ಲಾ ದೇವಾಲಯಗಳ ಧರ್ಮಾಧಿಕಾರಿಗಳು ಸ್ಥಾನಿಕ ಬ್ರಾಹ್ಮಣರಾಗಿದ್ದರು ಎಂಬ ತೀರ್ಮಾನಕ್ಕೆ ಆಧಾರ ಸಾಲದು ಎಂದು ಗುರುರಾಜ ಭಟ್ಟರೂ ಬರೆಯುತ್ತಾರೆ.

ಆದುದರಿಂದ ಈ ನಮ್ಮ ನಾಡಿನ ದೇವಸ್ಥಾನಗಳಲ್ಲಿ ಅಧಿಕಾರಿಗಳಾಗಿ ನಿಯುಕ್ತರಾದ ಸ್ಥಾನಿಕರೂ ಸಹ ಪ್ರಾಯಶಃ ಜೈನರೊ, ಕಾಳಾಮುಖರೊ ಆಗಿದ್ದಾರೆಂಬುದನ್ನು ತಿಳಿಯಬಹುದಾಗಿದೆ. ಪಡುಬಿದ್ರೆ, ಪುತ್ತಿಗೆ, ಬಪ್ಪನಾಡು, ಎಲ್ಲೂರು, ಎರ್ಮಾಳು, ಕಾಪು ಮೊದಲಾದ ಪ್ರಸಿದ್ಧ ದೇವಸ್ಥಾನಗಳಲ್ಲಿ ಜೈನರಾಜರೇ ಅಧಿಕಾರಿಗಳಾಗಿದ್ದರು. ಇತರ ದೇವಸ್ಥಾನಗಳಲ್ಲಿ ಸಹ ಗುತ್ತಿನವರು ಅಧಿಕಾರಿಗಳಾಗಿ ಮೊಕ್ತೇಸರರಾಗಿ ಇದ್ದದ್ದು ಕಂಡುಬರುತ್ತದೆ. ಶಾಸನಗಳಲ್ಲಿರುವ ಸ್ಥಾನಿಕ, ಸ್ಥಾನಪತಿ, ಸ್ಥಾನಾಧ್ಯಕ್ಷ, ಈ ಪದಗಳು (1) ಜೈನರು, (2) ಕಾಳಾಮುಖ ಶೈವರು, (3) ಶ್ರೀವೈಷ್ಣವರು—ಹೀಗೆ ಮೂರು ವಿಧದವರನ್ನು ನಿರ್ದೇಶಿಸುತ್ತದೆ ಎಂದು ಗುರುರಾಜ ಭಟ್ಟರೂ, ಶ್ರೀನಿವಾಸರಾಯರೂ ಅಭಿಪ್ರಾಯಪಡುತ್ತಾರೆ. ದೇವಕಾರಿ ಸ್ಥಾನಿಕರಿಗೆ ದೇವಸ್ಥಾನಗಳಲ್ಲಿ ಅಧಿಕಾರ ಇದ್ದ ಬಗ್ಗೆ ದಾಖಲೆಗಳು ಏನೂ ಇರುವುದಿಲ್ಲ. ಒಂದು ವೇಳೆ ಅಂಥಾ ದಾಖಲೆಗಳು ಇದ್ದರೆ, ತಂಜಾವೂರು ಜಿಲ್ಲಾ ಮನ್ನಾರುಗುಡಿ ದೇವಸ್ಥಾನದ ಸ್ಥಾನಿಕನು ಎಂಡೋಮೆಂಟಿನವರು ನೇಮಿಸಿದ ಎಗ್ಸಿಕ್ಯೂಟಿವ್ ಆಫೀಸರರ ವಿರುದ್ಧ ವಿಜಯನಗರದ ಅರಸರ ಸನದಿನ ಪ್ರಕಾರ ತನ್ನ ಹಕ್ಕನ್ನು ಮದ್ರಾಸ್ ಹೈಕೋರ್ಟಿನಲ್ಲಿ ಅರ್ಜಿಮಾಡಿ 7—7—1956ರಲ್ಲಿ ಡಿಕ್ರಿ ಪಡಕೊಂಡು ಸ್ಥಿರಪಡಿಸಿಕೊಂಡನು. ಅದರಂತೆ ತಾವೂ ಸಹ ತಮ್ಮ ಹಕ್ಕನ್ನು ಆ ದಾಖಲೆಗಳ ಮೂಲಕ ಸ್ಥಿರಪಡಿಸಿಕೊಳ್ಳಬಹುದಲ್ಲಾ? ಸೇಲಂ ಜಿಲ್ಲಾ ಪಡಮುಂಗಲಂ ವೆಂಕಟರಮಣ ದೇವಸ್ಥಾನದ ಸ್ಥಾನಿಕ ಮತ್ತು ಅರ್ಚಕ ವೆಂಕಟಕೃಷ್ಣ ಅಯ್ಯಂಗಾರ ವಿಜಯ ನಗರದ ರಾಜರಿಂದ ಕೊಡಲ್ಪಟ್ಟ ಸನದು ಹಾಜರು ಪಡಿಸಿ ಹೈಕೋರ್ಟಿನಿಂದ 2—5—1956ರಲ್ಲು ತೀರ್ಪು ಪಡೆದ ಪ್ರಕಾರ ತನ್ನ ಸ್ಥಾನಿಕ ಹಕ್ಕನ್ನು ಸಾಬೀತುಮಾಡಿಕೊಂಡನೆಂದು ರಾಯರು ಬರೆಯುತ್ತಾರೆ. ಹಾಗೆ ದಾಖಲೆ

ಗಳು ದೇವಕಾರಿ ಸ್ಥಾನಿಕರಲ್ಲಿ ಇಲ್ಲವೆಂಬುದು ನಿಜ. ಸರಕಾರದವರು ಶಾಸನಗಳನ್ನು ಸಂಗ್ರಹಿಸಿ ಅಚ್ಚು ಹಾಕಿಸಿದರು. ಅದನ್ನು ಓದುವಾಗ ಸ್ಥಾನಾಧಿಪತಿ, ಸ್ಥಾನಪತಿ, ಸ್ಥಾನಿಕ, ಎಂಬೀ ಪದಗಳು ಕಂಡುಬಂದವು. ಅದರ ಅರ್ಥ ತಾವೇ ಎಂದು ಕಲ್ಪಿಸಿ ಕೊಂಡರು. ಆದುದರಿಂದ ಜೈನಾದಿಗಳ ಜಿಲ್ಲಾಧಿಕಾರ, ಮತ್ತು ಧರ್ಮಾಧಿಕಾರ, ತಮ್ಮದೇ ಎಂದು ಭಾವಿಸಿದರು. ತದನಂತರ ಈ ಹವ್ಯಾಸಗಳು ಸುರು ಆಯಿತು. ಸ್ಥಾನಿಕ ಶಬ್ದ ಅನೇಕಾರ್ಥ ಉಳ್ಳದ್ದು ಎಂದು ಸಿದ್ಧಪಡಿಸಲಾಗಿದೆ. ಹರಿ ಶಬ್ದಕ್ಕೆ ಸಿಂಹ ಮತ್ತು ಕೋತಿ ಎಂಬ ಎರಡು ಅರ್ಥವುಂಟು. ಕೋತಿಗಳು "ನಾವೂ ಹರಿ ಎಂಬ ಹೆಸರುಳ್ಳವರು. ನಾವು ಮೃಗರಾಜರಿದ್ದೇವೆ. ಅರಣ್ಯದ ಮೃಗಗಳು ಎಲ್ಲಾ ವಂದಿಸ ಬೇಕು. ಆಜ್ಞಾವರ್ತಿಗಳಾಗಬೇಕು" ಎಂದು ಅಂದುಕೊಂಡ ಹಾಗಾಯಿತಲ್ಲಾ? ಶಾಸನಗಳಲ್ಲಿ ಸ್ಥಾನಿಕ ಪದಗಳು ಇವೆ. ದೇವಕಾರಿಗಳಿಗೂ ಸ್ಥಾನಿಕ ಎಂಬ ಹೆಸರು ಇವೆ. ಶಾಸನದ ಸ್ಥಾನಿಕರು ದೇವಕಾರಿಗಳೇ ಎಂದು ಸಿದ್ಧಮಾಡಲ್ಪಟ್ಟಿದೆಯೇ? ಇನ್ನಾದರೂ ಸಿದ್ಧಮಾಡಲಿಕ್ಕಾಗುತ್ತದೆಯೇ? ಅದು ಯಾವುದೂ ಇರುವುದಿಲ್ಲ. ಪ್ರತ್ಯುತ ಶ್ರೀನಿವಾಸ ರಾಯರು ಬರೆಯುತ್ತಾರಲ್ಲ—ತಾವು ಅಂದರೆ ದೇವಕಾರಿ ಸ್ಥಾನಿಕರು "ಶಾಸನದ ಶಿವಬ್ರಾಹ್ಮಣರಲ್ಲ"ವೆಂದು (ಸ್ಥಾನಿಕ ಬ್ರಾಹ್ಮಣರು ಪುಸ್ತಕದ ಪುಟ 61ರಲ್ಲಿ) ಅವರ ವಾಕ್ಯ ಇಂತಿದೆ. "ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸ್ಥಾನಿಕ ಶಬ್ದವು ಜಾತಿ ವಾಚಕವಾಗುತ್ತದೆ, ಎಂದು ಆ ಪಂಗಡದವರು ತಮ್ಮನ್ನು ಶಿವ ಬ್ರಾಹ್ಮಣರೆಂದು ಸಂಬೋಧಿಸಬೇಕಾಗಿ 1874ನೇ ಇಸವಿ ಮಾರ್ಚಿ ತಿಂಗಳು 6ನೇ ತಾರೀಕು ಇಸ್ತಿಹಾರು ಮೂಲಕ ಪ್ರಕಟಿಸಿದ್ದರಷ್ಟೆ. ಈ ಶಿವಬ್ರಾಹ್ಮಣರು ಶಾಸನದ ಶಿವಬ್ರಾಹ್ಮಣರಲ್ಲ. ಒಂದಕ್ಕೊಂದು ಭ್ರಮಿಸಕೂಡದು." ಶಾಸನದ ಶಿವಬ್ರಾಹ್ಮಣ ರೆಂದರೆ ಕಾಳಾಮುಖ ಶೈವರು. ಅವರು ತಾವಲ್ಲವೆಂದು ಅಭಿಪ್ರಾಯ. ಇನ್ನುಳಿದ ಶಾಸನದ ಸ್ಥಾನಿಕರೆಂದರೆ, ಜೈನರು ಮತ್ತು ಶ್ರೀವೈಷ್ಣವರು. ಅಂದಮೇಲೆ ಶಾಸನ ಗಳಲ್ಲಿ ದೇವಕಾರಿ ಸ್ಥಾನಿಕರಿಗೆ ಜಾಗ ಇಲ್ಲವೆಂದಾಯಿತಷ್ಟೆ?

ಇನ್ನು ಒಂದುವೇಳೆ ಶಾಸನಗಳಲ್ಲಿ ಉಕ್ತಪ್ರಕಾರ ಧರ್ಮಾಧಿಕಾರ ಮೂಲಿನ ಉತ್ತಮೋತ್ತಮ ಬ್ರಾಹ್ಮಣನೆಂಬ ಅರ್ಥ ಆಗುವ ಅತಿ ಮಹತ್ವದ "ಸ್ಥಾನಿಕ" ಶಬ್ದ ತಮ್ಮಲ್ಲಿ ಇದ್ದುದೇ ಆದರೆ ಮತ್ತು ಹಾಗೆ ತಿಳಿದುಕೊಂಡದ್ದು ಇದ್ದರೆ ಅವನ್ನು ಬಿಟ್ಟು ಬಿಡಲಿಕ್ಕೂ ಸಲ್ಲದ "ಶಿವಬ್ರಾಹ್ಮಣ" ಶಬ್ದ ಹಚ್ಚಿಕೊಳ್ಳಲಿಕ್ಕೂ ಏನು ಕಾರಣವಿತ್ತು? ಸರಕಾರಕ್ಕೆ ಅರ್ಜಿ ಮಾಡಿ ಗಜೇಟಿನಲ್ಲಿ ಪ್ರಕಟಿಸಿ ಶಿವಬ್ರಾಹ್ಮಣರೆನಿಸಿಕೊಂಡದ್ದಾಗಿದೆ. ಒಟ್ಟಾರೆ ಈ ದೇವಕಾರಿ ಸ್ಥಾನಿಕರು ಕೌಟಿಲ್ಯನ ಅರ್ಥಶಾಸ್ತ್ರದ ಜಿಲ್ಲಾಧಿಕಾರಿ ಸ್ಥಾನಿಕ ರಾಗಿಯಾಗಲಿ, ಧರ್ಮಾಧಿಕಾರಿ ಸ್ಥಾನಿಕರಾಗಿಯಾಗಲಿ, ಯಾವಾಗಲೂ ಇರಲೇ ಇಲ್ಲ. ಇದ್ದೆವು ಎಂದು ತಿಳಿದುಕೊಳ್ಳಲೂ ಇಲ್ಲ. ಇದೀಗ ಹಿಂದೆ ಹೇಳಿದಂತೆ ಶಾಸನಗಳನ್ನು ನೋಡಿಕೊಂಡು ಆರ್ಯಸಮಾಜದವರು ವೇದದಲ್ಲಿಯ ಆರ್ಯಶಬ್ದವನ್ನು ತಮ್ಮಲ್ಲಿ ಹಚ್ಚಿಕೊಂಡಂತೆ, ಶಾಸನದ ಸ್ಥಾನಿಕ ಶಬ್ದವನ್ನು ತಮ್ಮಲ್ಲಿ ಹಚ್ಚಿಕೊಳ್ಳುವ ಪ್ರಯತ್ನ

ಮಾತ್ರ. ಸಾಲೆತ್ತೂರರವರೂ ಅವರನ್ನೇ ಹಿಂಬಾಲಿಸುವ ಶ್ರೀನಿವಾಸರಾಯರೂ ಇನ್ನಿತರರೂ ಶಾಸನಗಳಿಗೆ ಅಪಾರ್ಥ ಮಾಡಿರುವರೆಂದೇ ಗುರುರಾಜ ಭಟ್ಟರ ಅಭಿಪ್ರಾಯ ಆಗಿದೆ. ಆದುದರಿಂದ ಪ್ರಪ್ರತ್ಯೇಕ ಶಾಸನಗಳನ್ನು ತೆಗೆದುಕೊಂಡು ವಿಮರ್ಶೆ ಮಾಡುವದು ಅನಾವಶ್ಯಕವೇ ಸರಿ. ಆವಶ್ಯಕ ಉಂಟಾದರೆ ಸದರಿ ಶಾಸನಗಳ ಅಪ್ರಯೋಜಕತೆಯನ್ನು ತೋರಿಸುವದೂ ಅಸಾಧ್ಯವಲ್ಲ.

ಸಹ್ಯಾದ್ರಿಖಂಡದಲ್ಲಿ ಇವರಿಗಾಗಿ ಇವರ ಜನಕತಂದೆಯು 8 ಗ್ರಾಮಗಳನ್ನು ಕೊಟ್ಟದ್ದಾಗಿ ಉಲ್ಲಿಖಿತವಾಗಿದೆ. ಅದರ ಮಟ್ಟಿಗೆ ಅಧಿಕಾರ ಮತ್ತು ಅನುಭವ ಇದ್ದರೆ ಆ ಉದಾಹರಣೆ ಮೇಲಿಂದ ಎಲ್ಲಾ ಕಡೆಗಿರುವ ಅಧಿಕಾರಗಳು ತಮ್ಮದೇ ಎಂದು ಹೇಳುವುದು ಹುಚ್ಚುತನ. ಮಂಗಳೂರು ತಾಲೂಕು ತೋಕೂರ ದೇವಸ್ಥಾನ, ಉಡುಪಿ ತಾಲೂಕು ಕುಂಜೂರು ದೇವಸ್ಥಾನಗಳನ್ನು ಆಕ್ರಮಿಸಲು ಹೋಗಿ ಈ ಸ್ಥಾನಿಕರು ಸೋತು ಅವಮಾನಿತರಾದ ಸಂಗತಿಯನ್ನು ಪುಟ 12-14ರಲ್ಲಿ ಶ್ರೀನಿವಾಸರಾಯರು ಒಪ್ಪುತ್ತಾರೆ. ಶೀವಳ್ಳಿಯವರು ಆಕ್ರಮಿಸಿದರು ಎಂಬುದು ಮಾತ್ರ ತಿರುಬೊಬ್ಬೆ. ಎಲ್ಲಾ ದೇವಸ್ಥಾನಗಳಲ್ಲಿಯೂ ಈ ಸ್ಥಾನಿಕರು ಪಾಟಾಳಿ ಕೆಲಸ ಮಾಡುತ್ತಿದ್ದಾರೆಂಬುದು ನಿಜ. ಪಾಟಾಳಿ ಕೆಲಸ ಮುಂದೆ ವಿವರಿಸಲಾಗುತ್ತದೆ. ಒಟ್ಟಾರೆ ಪಾಟಾಳಿಯು ಅಧಿಕಾರಿ ಸ್ಥಾನಿಕರ ಆಜ್ಞಾವರ್ತಿ ಎಂದೂ, ಸ್ಥಾನಿಕ ಜಾತಿಯವರು ಬೇರೆ, ಅಧಿಕಾರಿ ಸ್ಥಾನಿಕರು ಬೇರೆ ಎಂದೂ ಇದರಿಂದ ಸಿದ್ಧವಾಗುತ್ತದೆ.

## ಕುಕ್ಕೆ ಸುಬ್ರಮ್ಹಣ್ಯ ದೇವಸ್ಥಾನದ ಆಡಳಿತೆ

ಸುಬ್ರಮ್ಹಣ್ಯದ ದೇವಸ್ಥಾನದಲ್ಲಿ ದೇವಕಾರಿ ಸ್ಥಾನಿಕರ ಸರ್ವಾಧಿಕಾರವಿತ್ತೆಂಬುದಕ್ಕೂ ಸರಿಯಾದ ಆಧಾರವಿರುವುದಿಲ್ಲ. 1469ನೇ ಇಸವಿಯ ಬುಕ್ಕರಾಜನ ರಾಯಸವಿದೆ. ಸದರಿ ರಾಯಸ ಸುಬ್ರಮ್ಹಣ್ಯ ಮಠದ ಶ್ರೀಗಳವರಿಗೆ ಬುಕ್ಕರಾಜನಿಂದ ದೊರೆತಿದ್ದುದು ನಿಜ. ಸದರಿ ರಾಯಸವು ಸ್ಥಾನಿಕರಿಗೆ ಕೊಟ್ಟದ್ದು ಇರಬೇಕೆಂದೂ ಅದನ್ನು ಶ್ರೀಮಠದವರು ಅಪಹರಿಸಿ ತಮಗೆ ಕೊಡುವುದಿಲ್ಲವೆಂದೂ ತಪ್ಪು ಕಲ್ಪನೆಯನ್ನು ಆಧರಿಸಿದ್ದಾಗಿದೆ ಸರ್ವಾಧಿಕಾರವಿತ್ತೆಂಬ ಆ ವಾದ. ವಸ್ತುಸ್ಥಿತಿಯೆಂದರೆ 1272ನೇ ಇಸವಿಯಲ್ಲಿ ಕುಕ್ಕೇ ಬೀಡಿನ ಸುಬ್ಬಯ್ಯ ಬಲ್ಲಾಳನು ಸುಬ್ರಮ್ಹಣ್ಯ ಮಠದ ಸ್ವಾಮಿಜೀಯವರಿಗೆ ಸುಬ್ರಮ್ಹಣ್ಯ ದೇವಸ್ಥಾನದ ಸರ್ವಾಧಿಕಾರವನ್ನು ತಾಮ್ರಶಾಸನದ ಪ್ರಕಾರ ಒಪ್ಪಿಸಿದ ಬಳಿಕ ಸ್ವಾಮಿಜೀಯವರು ತಮ್ಮ ಮಠದ ಶಿಷ್ಯರಾದ ಈ ಸ್ಥಾನಿಕರ ಮೂಲಕ ದೇವಸ್ಥಾನದ ಕೆಲಸಗಳನ್ನು ಮಾಡಿಸಿಕೊಂಡು ಬಂದಿದ್ದರೆಂಬುದು ನಿಜವಾದ ಸಂಗತಿ. ಅದು ತಮ್ಮದೇ ಆದ ಸರ್ವಾಧಿಕಾರವಾಗಿತ್ತೆಂದು ಹೇಳುತ್ತಿರುವುದು ಸ್ಥಾನಿಕರ ಉದ್ಧಟತನ. ಕೋರ್ಟಿನವರು ಸಹ 1817ರ ತನಕ ದೇವಸ್ಥಾನದ ಆಡಳಿತೆಯು ಹೇಗೆ ನಡೆಸಲ್ಪಡುತ್ತಿತ್ತು ಎಂಬುದರ ವಿಷಯವನ್ನು ನಂಬತಕ್ಕ ರಿಕಾರ್ಡು

ಕೋರ್ಟಿನ ಮುಂದೆ ಇರುವುದಿಲ್ಲ" ಎನ್ನುತ್ತಾರೆ. ಈ ಸ್ಥಾನಿಕರ ಹತ್ತಿರ ದಾಖಲೆಗಳು ಇರುತ್ತಿದ್ದರೆ ಹಾಜರುಪಡಿಸಬಹುದಿತ್ತಲ್ಲ! ಇದರಿಂದ ಈ ದೇವಕಾರಿಗಳು ಆಡಳಿತ ನಿರ್ವಹಿಸುತ್ತಿದ್ದರೆಂಬುದಕ್ಕೆ ರಿಕಾರ್ಡು ಇಲ್ಲವೆಂದಾಯಿತಷ್ಟೆ? "ಶ್ರೀನಿವಾಸರಾಯರು ಸನ್ 1469ರಲ್ಲಿ ಬುಕ್ಕರಾಯನು ಕೊಟ್ಟ ತಾಮ್ರಶಾಸನದಲ್ಲಿ ಪೋಲಿಗಾರ ಬಂಗನ ಮೇಲ್ವಿಚಾರಣೆಯಲ್ಲಿ ಆ ಸ್ಥಳದ ಸ್ಥಾನಿಕರು ಮೇನೇಜ್ ಮಾಡಿಕೊಂಡು ಬರುವಂತೆ ಕೊಡೋಣಾಗಿದೆಯೆಂದು ತಿಳಿದುಬರುತ್ತದೆ" ಎಂದು ಬರೆಯುತ್ತಾರೆ. ಈ ಶಾಸನದಲ್ಲಿ ಬರೆದಿರುವ ಅಧಿಕಾರಿ ಸ್ಥಾನಿಕರನ್ನು ಜಾತಿ ಸ್ಥಾನಿಕರು ಅಂದರೆ ದೇವಕಾರಿ ಸ್ಥಾನಿಕರು ಎಂದು ಅಪಾರ್ಥ ಮಾಡಿಕೊಂಡು ತಲೆ ಕೆಡಿಸಿಕೊಂಡದ್ದಾಗಿದೆ. ಆ ಶಾಸನವು ತಮಗೆ ಅಂದರೆ ದೇವಕಾರಿ ಸ್ಥಾನಿಕರಿಗೆಂದೇ ಕೊಟ್ಟದ್ದಾಗಿದ್ದರೆ ತಾವು ಏಕೆ ಅದನ್ನು ಹಾಜರು ಪಡಿಸಿ, ತಮ್ಮ ಹಕ್ಕನ್ನು ಸ್ಥಿರಮಾಡಿಕೊಂಡಿಲ್ಲ? ತಮ್ಮ ಹತ್ತಿರ ಆ ತಾಮ್ರಶಾಸನ ಇಲ್ಲ. ಹಾಗೆ ಶಾಸನ ಇದೆಯೆಂದು ತಿಳಿದಿರಲೂ ಇಲ್ಲ. ಅದರಂತೆ ಸ್ಥಾನಿಕ ಅಧಿಕಾರಿಯಾಗಿ ಮೇನೇಜ್ ಮಾಡುತ್ತಾ ಇರಲೂ ಇಲ್ಲ. ಇದೀಗ ರಾಯರು O. S. No. 27/1886ನೇ ದಾವೆಯ ಜಡ್ಜ್‌ಮೆಂಟನ್ನು ಲಾ ರಿಪೋರ್ಟಿನಲ್ಲಿ ಓದಿಕೊಂಡು ಹೊಸ ತೊಂದು ತನ್ನ ಕಲ್ಪನೆಯನ್ನು ಹೊರಪಡಿಸುತ್ತಿದ್ದಾರೆ ಎನ್ನಬಹುದಷ್ಟೆ? ನಿಜಸ್ಥಿತಿ ಯೆಂದರೆ 1272ನೇ ಇಸವಿಯಲ್ಲಿ ಕುಕ್ಕೆ ಬೀಡಿನ ಬಲ್ಲಾಳರಾಯನು ಗೌರವಪೂರ್ವಕ ವಾಗಿ ಸುಬ್ರಮ್ಹಣ್ಯದ ಸರ್ವಾಧಿಕಾರವನ್ನು ಸುಬ್ರಮ್ಹಣ್ಯ ಮಠದ ಸ್ವಾಮಿಜೀಯವ ರಿಗೆ ತಾಮ್ರಶಾಸನಪೂರ್ವಕ ಧಾರಾ ಎರದು ದಾನ ಕೊಟ್ಟನು. ಇಲ್ಲಿಂದ ಶ್ರೀಸುಬ್ರ ಮ್ಹಣ್ಯ ಮಠದ ಸ್ವಾಮಿಜೀಯವರು ತಿರುಪತಿಯಲ್ಲಿ ಮಹಂತನು ಅಧಿಕಾರ ಮಾಡು ತ್ತಿದ್ದಂತೆ ಸುಬ್ರಮ್ಹಣ್ಯದ ದೇವಸ್ಥಾನದಲ್ಲಿ ಅಧಿಕಾರ ನಡೆಸುತ್ತಿದ್ದರು. ಈ ವಿಷಯ ದಲ್ಲಿ ಸಂಶಯವಿರಲು ಶಕ್ಯವಿಲ್ಲ. ಕುಕ್ಕೆ ಬಲ್ಲಾಳನು ಬರಕೊಟ್ಟ ಸನ್ 1272ರ ತಾಮ್ರಶಾಸನವು O. S. No. 27/1886ನೇದರ ಜಡ್ಜ್‌ಮೆಂಟ್ ಆಗುವುದಕ್ಕಿಂತ ಎಷ್ಟೋ ವರ್ಷಗಳ ಪೂರ್ವದಲ್ಲಿಯೇ ಸರಕಾರದ ಮಾನ್ಯತೆಯನ್ನು ಪಡೆದಿತ್ತು ಎಂಬ ಮಜಕೂರು ಮಿಸಲೇನ್ಸ್ ಅರ್ಜಿ ನಂಬ್ರ 440/1890ರ ತೀರ್ಪಿನಿಂದ ಸ್ಪಷ್ಟವಾ ಗುತ್ತದೆ. ಸದರಿ ತೀರ್ಪನ್ನು ಆದ್ಯಂತ ಪರಿಶಿಷ್ಟದಲ್ಲಿ ಕೊಡಲಾಗುತ್ತದೆ. ಸದರಿ ತೀರ್ಪಿನಲ್ಲಿ ಸನ್ 1849ರಲ್ಲಿ ಶ್ರೀಸುಬ್ರಮ್ಹಣ್ಯ ಮಠದ ಆಗಿನ ಶ್ರೀಗಳವರು "ವಿದ್ಯಾ ರಾಜತೀರ್ಥರು ತಾಮ್ರಶಾಸನದ ಪ್ರಕಾರ ತಮ್ಮ ಪರಂಪರಾಪ್ರಾಪ್ತ ಹಕ್ಕನ್ನು ಪ್ರಸ್ತಾ ಪಿಸಿ ಕಲೆಕ್ಟರ ಮುಂದೆ ಅರ್ಜಿ ಮಾಡಿಕೊಂಡಿದ್ದಾರೆ. ಆ ಅರ್ಜಿಯು ಸರಕಾರದ ಮಾನ್ಯತೆಯನ್ನು ಪಡೆದಿತ್ತು. ಆದುದರಿಂದ 27/1886ನೇ ದಾವೆಯ ಕಾಲದಲ್ಲಿ ತಮ್ಮ ಸ್ಟೇಟ್‌ಮೆಂಟನ್ನು ದೃಢಪಡಿಸಲಿಕ್ಕಾಗಿ ತಾಮ್ರಶಾಸನವು ತಯಾರಿಸಿದ್ದಲ್ಲ. "ಹೈಕೋರ್ಟಿನ ಅಭಿಪ್ರಾಯವೇನೇ ಇರಲಿ. ಪ್ರಕೃತ ನನ್ನ ಮುಂದೆ ಇರುವ ಪುರಾವೆ ಗಳು ಸುಳ್ಳೆಂದು ಒಪ್ಪಿಕೊಳ್ಳಲುಬರುವಂತಿಲ್ಲ. ಸತ್ಯವೆಂದೇ ಭಾವಿಸಬೇಕಾಗುತ್ತದೆ. ಸದರಿ ಪುರಾವೆಯ ದಾಖಲೆಗಳನ್ನು ಹೈಕೋರ್ಟಿನಲ್ಲಿ ಹಾಜರುಪಡಿಸಲು ಮಠದವರು

ಅಸಮರ್ಥರಾದರು. ಇತ್ಯಾದಿ ಮಜಕೂರು ಸದರಿ ವಿಸಲಿನ್ಸ ದಾವೆಯ ಜಡ್ಜ್‌ಮೆಂಟಿನಲ್ಲಿ ಬರೆಯಲಾಗಿದೆ. ಮತ್ತು ಹೈಕೋರ್ಟಿನ ಜಡ್ಜ್‌ಮೆಂಟಿನಲ್ಲಿ ಬರೆಯಲಾದ ತಾಮ್ರ ಶಾಸನ ಫೋರ್ಜರಿ ಎಂಬುದರ ಬಗ್ಗೆ ಕ್ರಿಮಿನಲ್ ಕೇಸ್ ಮಾಡಲು ಸೆಂಕ್ಷನ್ ನಿರಾಕರಿಸಲಾಗಿದೆ. ಆದುದರಿಂದ ಸುಬ್ರಮ್ಹಣ್ಯ ಸ್ವಾಮಿಜೀಯವರಿಗೆ ಸುಬ್ರಮ್ಹಣ್ಯ ದೇವಸ್ಥಾನದ ಮೆನೇಜ್‌ಮೆಂಟು ಮಾಡುವ ಪರಂಪರಾಪ್ರಾಪ್ತ ಹಕ್ಕು ತಾಮ್ರಶಾಸನದಿಂದ ಸ್ಥಿರವಾಗಿತ್ತು ಎಂದು ಸಿದ್ಧವಾಗುತ್ತದೆ.

ಮತ್ತು ಸುಮಾರು ಸನ್ 1614ರಲ್ಲಿ ಅವತರಿಸಿದ ಭಾವಿ ಸಮೀರ ಶ್ರೀಸೋದೇ ವಾದಿರಾಜ ಸ್ವಾಮಿಯವರು ಸದರಿ ತಾಮ್ರ ಶಾಸನ ಕುಕ್ಕೆ ಬಲ್ಲಾಳ ರಾಯನಿಂದ ಪ್ರಾಪ್ತವಾಗಲು ಕಾರಣವಾದ ಒಂದು ಇತಿಹಾಸವನ್ನು ಸೂಚಿಸುತ್ತಾ ತಾಮ್ರಶಾಸನದ ಸತ್ಯತೆಯನ್ನು ಎತ್ತಿ ಹಿಡಿದಿದ್ದಾರೆ. ಒಂದು ಸಮಯದಲ್ಲಿ ಸುಬ್ರಮ್ಹಣ್ಯ ಮಠದ ಪ್ರಥಮ ಮಾಧ್ವ ಸ್ವಾಮಿಗಳಾದ ಶ್ರೀಮದ್ವಿಷ್ಣುತೀರ್ಥ ಶ್ರೀಪಾದಂಗಳವರು ತಮ್ಮ ಶಿಷ್ಯರಾದ ವ್ಯಾಸತೀರ್ಥರಿಗೆ ಶ್ರೀಮಧ್ವಾಚಾರ್ಯರಿಂದ ದತ್ತವಾದ ವ್ಯಾಸಸಂಪುಟವನ್ನು ಕೊಟ್ಟರು. ಅದನ್ನು ವ್ಯಾಸತೀರ್ಥರು ಪಡೆದು ವಿಶೇಷ ಭಕ್ತಿಯಿಂದ ಪೂಜಿಸಿಕೊಂಡು ಬರುತ್ತಿರಲಾಗಿ ಬಲ್ಲಾಳ ರಾಜನಿಗೆ ಅಮೋಘ ರತ್ನಗಳಿಂದ ತುಂಬಿದ ಸಂಪುಟವೊಂದು ಶ್ರೀಗಳವರಲ್ಲಿದೆ ಎಂದು ಜನರ ಮೂಲಕ ತಿಳಿಯಿತು. ಆತನು ಬಲಾತ್ಕಾರದಿಂದ ಆ ಸಂಪುಟವನ್ನು ತರಿಸಿ ಒಡೆಯಲು ಪ್ರಯತ್ನಿಸಿದಾಗ, ಆ ಸಂಪುಟ ಒಡೆಯಲೇ ಇಲ್ಲ. ಪ್ರತ್ಯುತ ಮೈಯೆಲ್ಲಾ ಉರಿದು ಸಂತ್ರಸ್ತನಾದನು. ಆಗ ತನ್ನ ಉದ್ಧಟತನದಿಂದ ಪ್ರಾಪ್ತವಾದ ಆ ತಾಪವನ್ನು (ಮೈ ಉರಿಯನ್ನು) ಶಾಂತ ಪಡಿಸಲು ಶ್ರೀಗಳವರನ್ನು ಯಾಚಿಸುತ್ತಾ ಅವರ ಅನುಗ್ರಹದಿಂದ ಶಾಂತನಾದ ಮೇಲೆ ಕೃತಜ್ಞತೆ ವ್ಯಕ್ತಪಡಿಸುತ್ತಾ ತಾಮ್ರಶಾಸನ ಪೂರ್ವಕ ತನಗಿದ್ದ ದೇವಸ್ಥಾನದ ಸರ್ವಾಧಿಕಾರವನ್ನು ಶ್ರೀಗಳವರಿಗೆ ಅರ್ಪಿಸಿದನು. ಅದರ ಸ್ಮಾರಕವಾಗಿ ದೇವಸ್ಥಾನದಲ್ಲಿ ಬಲ್ಲಾಳ ರಾಯನ ದೊಡ್ಡದೊಂದು ವಿಗ್ರಹವಿದ್ದು ಅದರ ಮುಂದೆ ಭಕ್ತರು ಸಾಸುವೆ, ಬೆಣ್ಣೆ, ಕುಂಬಳಕಾಯಿ ಹರಿಕೆ ಹೇಳಿಕೊಳ್ಳುತ್ತಾರೆ. ಹರಿಕೆ ಸಲಾಯಿಸುತ್ತಾ ಸದರಿ ಹರಕೆ ಬಂದ ಸಾಸುವೆ, ಬೆಣ್ಣೆ, ಕುಂಬಳಕಾಯಿ ಶ್ರೀಸುಬ್ರಮ್ಹಣ್ಯ ಮಠಕ್ಕೆ ಕೊಡತಕ್ಕದ್ದು ಎಂಬ ಸಂಪ್ರದಾಯವನ್ನು ಗವರ್ನ್‌ಮೆಂಟು ಆಡಳಿತೆ ಇರುವಾಗ ಸಹ ಅದರ ಬಗ್ಗೆ ಕೆಲ ಹಣಗಳು ದೇವಸ್ಥಾನದ ಕಡೆಯಿಂದ ಶ್ರೀಮಠಕ್ಕೆ ಸಲಾಯಿಸುತ್ತಾ ಬಂದಿದ್ದ ಬಗ್ಗೆ ಮಠದೇವಾಲಯಗಳ ಲೆಖ್ಖ ಪತ್ರಗಳಲ್ಲಿ ನಮೂದು ಇರುತ್ತದೆ. "ಯತ್ರ ಸಂಪುಟಮಸ್ಫೋಟಂ ಕೃಷ್ಣಸ್ಯ ಸ್ಫೋರಯತ್ಯಹೊ" ಎಂಬ ಶ್ರೀ ವಾದಿರಾಜರ ಪದ್ಯದಲ್ಲಿ ಸ್ಫೋಟವಾಗದ, ಒಡೆಯದ, ಎಂಬ ಪದದಿಂದ ಬಲ್ಲಾಳರಾಯನು ಸದರಿ ಸಂಪುಟವನ್ನು ಒಡೆಯಲೆತ್ನಿಸಿದ ಮತ್ತು ಒಡೆಯದ ಎಂಬ ಅರ್ಥವನ್ನಲ್ಲದೆ ಬೇರೆ ಅರ್ಥ ಉಳ್ಳದ್ದಾಗಲಾರದು. ಈ ಎಲ್ಲಾ ಕಾರಣಗಳ ವಿಮರ್ಶನದಿಂದ ಕುಕ್ಕೆ ಬಲ್ಲಾಳರಾಯನ ತಾಮ್ರಶಾಸನದ ಪ್ರಾಮಾಣಿಕತನದ ಬಗ್ಗೆ ಇನ್ನು ಮೇಲೆ ಸಂಶಯವು ಉಳಿಯಲಾರದು. ಏವಂಚ 1272ರ ವರೆಗೆ ಸುಬ್ರಮ್ಹಣ್ಯ

ದೇವಸ್ಥಾನದ ಆಡಳಿತೆಯನ್ನು ಕುಕ್ಕೆ ಬಲ್ಲಾಳರೂ ತದನಂತರ ತಿರುಪತಿಯಲ್ಲಿ ಬಹು ಕಾಲದಿಂದ ಮಹಂತನು ಆಡಳಿತೆ ನಡೆಯಿಸಿಕೊಂಡು ಬಂದಂತೆ, ಶ್ರೀಸುಬ್ರಹ್ಮಣ್ಯ ದಲ್ಲಿಯೂ ದೇವಸ್ಥಾನದ ಆಡಳಿತೆಯನ್ನು ಶ್ರೀಸುಬ್ರಹ್ಮಣ್ಯ ಮಠದ ಶ್ರೀಗಳವರು ನಡೆ ಯಿಸಿಕೊಂಡು ಬಂದಿದ್ದಾರೆ ಎನ್ನುವುದು ಸ್ಪಷ್ಟವಾಗಿದೆ.

ಶ್ರೀನಿವಾಸರಾಯರು ಈ ತಾಮ್ರಶಾಸನ ಮಾತ್ರವಲ್ಲದೆ ಸನ್ 1387ರ ಗೋವೆ ರಾಜನಾದ ಮಾಧವರಾಯನು ಕೊಟ್ಟಿದ್ದನೆಂಬ ತಾಮ್ರಶಾಸನ ಒಂದು, 1469ರಲ್ಲಿ ಬುಕ್ಕರಾಯನು ಆ ದೇವಸ್ಥಾನಕ್ಕೆ ಕೊಟ್ಟನೆಂಬ ತಾಮ್ರಶಾಸನ ಒಂದು, ಹೀಗೆ 2 ಶಾಸನಗಳು ಸಹ ಶ್ರೀಸುಬ್ರಹ್ಮಣ್ಯ ಮಠದ ಶ್ರೀಗಳವರಲ್ಲಿದ್ದು ಅವೆರಡೂ ಶ್ರೀಸುಬ್ರ ಹ್ಮಣ್ಯ ದೇವಸ್ಥಾನದ ಆಡಳಿತೆಯು ಶ್ರೀಸುಬ್ರಹ್ಮಣ್ಯ ಮಠದ ಶ್ರೀಗಳವರ ಕಡೆ ಇತ್ತು ಎಂದೇ ಅಭಿಪ್ರಾಯಪಡುತ್ತಾರೆ. ದೇವಸ್ಥಾನದ ಆಡಳಿತೆ ಅವರಲ್ಲಿ ಇಲ್ಲದಿದ್ದರೆ ಆ ದೇವಸ್ಥಾನದ ರಿಕಾರ್ಡುಗಳು ಏಕೆ ಅವರಲ್ಲಿರಬೇಕು? ತುಡುಗುಮಾಡಿ ತಂದು ಇಟ್ಟುಕೊಂಡಿದ್ದರೇ? ದೇವಸ್ಥಾನದ ಅಧಿಕಾರ ತನ್ನಲ್ಲಿದೆ ಎಂಬುದನ್ನು ಸಾಬೀತು ಮಾಡಲಿಕ್ಕಷ್ಟೇ ಕೋರ್ಟಿನಲ್ಲಿ ಆ ಶಾಸನಗಳನ್ನು ಹಾಜರು ಪಡಿಸಿದರು. "ಆ ಎರಡು ಶಾಸನಗಳನ್ನು ಕೋರ್ಟಿನವರು ಎವಿಡೆನ್ಸ್ ಆಗಿ ತೆಗೆದುಕೊಂಡಿದ್ದಾರೆ ಅಂತ ರಾಯರ ಉಲ್ಲೇಖವಿದೆ. (P. 9) ಅಂತೂ ಶ್ರೀನಿವಾಸರಾಯರು ಮಾಧ್ವರನ್ನೂ ಮಾಧ್ವ ಮಠಗಳನ್ನೂ ನಿಂದಿಸುವ ಭರದಲ್ಲಿ "ತಮ್ಮ ವಿರುದ್ಧ ಇರುವ ದಾಖಲೆಗಳನ್ನು ತಾವೇ ಮುಂದಿಡುತ್ತಾರೆ" ಎಂದು ಧಾರಾಳ ಹೇಳಬಹುದು.

## ಪಾಟಾಳಿಗಳು

ಪಾಟಾಳಿಗಳೆಂದರೂ ಸ್ಥಾನಿಕ ಜಾತಿಯವರೇ ಎಂಬುದು ತೀರ್ಮಾನದ ಮಾತು. ಏಕೆಂದರೆ 8--1--1924ನೇ ದಿವಸದ ಶೃಂಗೇರಿ ಮಠದ ರಾಯಸದಿಂದ ಅದು ವಿದಿತವಾಗುತ್ತದೆ. ರಾಯಸದ ವಿವರ ಗುರುರಾಜ ಭಟ್ಟರು ಸನ್ 1966ನೇದರ ತಮ್ಮ ಪುಸ್ತಕದ ಪುಟ 55ರಲ್ಲಿ ವಿಮರ್ಶೆಗಾಗಿ ಅನುವಾದ ಮಾಡಿರುತ್ತಾರೆ. ಅದರಲ್ಲಿ "(1) ಸುಬ್ರಹ್ಮಣ್ಯ ಬ್ರಾಹ್ಮಣರು, (2) ಶಿವಬ್ರಾಹ್ಮಣರು, (3) ಸ್ಥಾನಿಕರು, (4) ಪಾಟಾಳಿಗಳು, (5) ಶಾನುಭೋಗರು, (6) ಕೊಪ್ಪಲರು, ಎಂದು ವ್ಯವ ಹರಿಸಲ್ಪಡುವ ಜನರು ಬ್ರಾಹ್ಮಣ ವರ್ಗಕ್ಕೆ ಸೇರಿದವರು. ಈ (ವಿವಾದೀ ಬ್ರಾಹ್ಮ ಣರು) ಜನರು ಷಟ್ಕರ್ಮಾಧಿಕಾರಿಗಳು. ಪಾತಿತ್ಯ ಸಂಪಾದಿತವಾದ ಯಾವ ದೋಷ ಗಳೂ ಈ ಜನರಲ್ಲಿ ಏರ್ಪಟ್ಟಿರುವಂತೆ ಇದು ವರೆಗೆ ಯಾರಿಂದಲೂ, ಯಾವ ರೀತಿ ಯಿಂದಲೂ, ನಿರೂಪಿಸಲ್ಪಟ್ಟಿರುವುದಿಲ್ಲ" ಎಂತ ಬರೆದದೆ. ಇದರಿಂದ ಸ್ಥಾನಿಕ, ಪಾಟಾಳಿ ಎಂಬ ಶಬ್ದಗಳು ಏಕಾರ್ಥವೆಂದಾಯಿತಷ್ಟೇ? ಬಹು ದಿವಸಗಳ ವರೆಗೆ ವಿಚಾರಮಾಡಿ ಹೊರಡಿಸಿದ ರಾಯಸವಿದು. ಗುರುಮಠದಿಂದ ಹೊರಟ ರಾಯಸ. ಇದರ ವಿಷಯ

ದಲ್ಲಿ ಸ್ಥಾನಿಕ ಜಾತಿಯವರಲ್ಲಿ ಎರಡು ಮಾತು ಇರಲಾರದು. ಮೇಲಾಗಿ ಶ್ರೀನಿವಾಸ ರಾಯರು "ಕನ್ನಡ ಜಿಲ್ಲೆಯಲ್ಲಿ ಕನ್ನಡವನ್ನಾಡುವ ಕೆಲವು ಭಾಗಗಳಲ್ಲಿ ಸ್ಥಾನಿಕರನ್ನು ಸರ್ವರೂ "ಪಾಟಾಳಿ" ಎಂಬುದಾಗಿ ಸಂಬೋಧಿಸುವುದುಂಟು" ಎಂದು ಒಪ್ಪಿದ್ದಾರೆ. ಚಂದ್ರಗುಪ್ತನ ರಾಜಧಾನಿಯಾದ ಪಾಟಲೀ ಪುತ್ರದಿಂದ ಬಂದಿರುವ ಪ್ರಯುಕ್ತ ಪಾಟಾಳಿಯೆಂತಲೂ ಅವರ ಅಭಿಪ್ರಾಯ. ಏನೇ ಇರಲಿ, ಗುರುಗಳು ಆಜ್ಞಾಪಿಸಿದ್ದಾರೆ. ಶಿಷ್ಯರು ಪರಿಗ್ರಹಿಸಿದ್ದಾರೆ. ಇನ್ನು ಹಿಂತಿರುಗಲು ಸಾಧ್ಯವಿಲ್ಲವಷ್ಟೇ?

ಶಿಲಾಲೇಖಗಳ ವಿಮರ್ಶೆಯಿಂದ ಗುರುರಾಜ ಭಟ್ಟರು ದೇವಸ್ಥಾನಗಳಲ್ಲಿಯ ಪಾಟಾಳಿಗಳ ಕರ್ತವ್ಯ ಕರ್ಮಗಳನ್ನು ಗೊತ್ತುಹಚ್ಚಿದ್ದಾರೆ. 1. ಪಾಟಾಳಿಯು ದೇವ ಸ್ಥಾನದ ಅಧಿಕಾರಿಯಾದ ಸ್ಥಾನಪತಿಯು ಆದೇಶವಿತ್ತಂತೆ ಕಾರ್ಯವನ್ನು ಪೂರೈಸ ಬೇಕು. 2. ಆಮಂತ್ರಣಗಳನ್ನು ಈಯಬೇಕು. 3. ವಿಶೇಷ ವರ್ತಮಾನಗಳನ್ನು ದೇವಸ್ಥಾನಕ್ಕೆ ಸಂಬಂಧಿಸಿದ ಸಮಾಜಕ್ಕೆ ತಿಳಿಸಬೇಕು. 4. ಇನ್ನಿತರ ಕೆಲಸಗಳನ್ನು ಮಾಡಬೇಕು ಇತ್ಯಾದಿ (1966ನೇ ಪು. P. 17). ಈ ವಿವೇಚನೆಯಿಂದ ದೇವಸ್ಥಾನ ಗಳಲ್ಲಿ ಆದೇಶ (ಅಪ್ಪಣೆ) ಕೊಡುವ ಸ್ಥಾನಿಕ, ಸ್ಥಾನಪತಿ, ಸ್ಥಾನಾಧ್ಯಕ್ಷ ಎಂಬ ಅಧಿ ಕಾರಿ ಬೇರೆ. ಮತ್ತು ಆದೇಶದಂತೆ ನಡೆಯುವ ಆ ಸ್ಥಾನಿಕನ ಆಜ್ಞಾನುವರ್ತಿ ಪಾಟಾಳಿ, ಸ್ಥಾನಿಕ ಎಂಬ ಸೇವಕವರ್ಗ ಬೇರೆ ಎಂದು ತೀರ್ಮಾನವಾಗುತ್ತದೆ.

ಗುರುರಾಜ ಭಟ್ಟರು ಜಾತಿ ಸ್ಥಾನಿಕರನ್ನು (ದೇವಕಾರಿಗಳನ್ನು) ಅಧಿಕಾರಿ ಸ್ಥಾನಿಕರನ್ನಾಗಿ ಪರಿವರ್ತನ ಮಾಡುವ ಉದ್ದೇಶದಿಂದ ಆಜ್ಞಾವರ್ತಿ ಪಾಟಾಳಿಗಳನ್ನು ಸ್ಥಾನಿಕ ಜಾತಿಯವರಿಂದ ಬೇರೆ ಇಡಬೇಕೆನ್ನುತ್ತಾರೆ. ಅತ ಏವ (1966ನೇ ಪುಸ್ತಕದ ಪುಟ 55ರಲ್ಲಿ) ಶೃಂಗೇರಿ ಮಠದ ರಾಯಸದ ಮೇಲೆ ರಿಸರ್ಚ್ ಮಾಡುತ್ತಾ ರಾಯಸ ದಲ್ಲಿ (ತಮ್ಮ ಮಠದ ಶಿಷ್ಯರಾದ) "ಸ್ಥಾನಿಕರು ಪಾಟಾಳಿಗಳು ಮತ್ತು ಶ್ಯಾನು ಭೋಗರು ಎಂದು ವ್ಯವಹರಿಸಲ್ಪಡುವ ಪಂಗಡ" ಎಂಬ ಒಕ್ಕಣೆಯು ಸಮಂಜಸವಲ್ಲ. ದೇವಸ್ಥಾನದ ಅಧಿಕಾರಿ ಎಂಬ ಅರ್ಥದಲ್ಲಿ ಸ್ಥಾನಿಕ ಪದದ ಉತ್ಪತ್ತಿ. ಈ ಮೊದಲೇ ನಿಷ್ಕರ್ಷಿಸಿದಂತೆ ಪಾಟಾಳಿಯು ಸ್ಥಾನಿಕನ ಅಧಿಕಾರಕ್ಕೊಳಪಟ್ಟ ಆತನ ಅಪ್ಪಣೆ ಪ್ರಕಾರ ನಡೆಯುವ ದೇಗುಲದ ಸೇವಕ ವರ್ಗಕ್ಕೆ ಸೇರಿದವನು. ಅಂತೆಯೇ ಶ್ಯಾನು ಭೋಗನು ದೇವಸ್ಥಾನದ ಲೆಕ್ಕಪತ್ರಗಳನ್ನು ಇಟ್ಟುಕೊಳ್ಳುವವನು. ಆದುದರಿಂದ ಪಾಟಾಳಿ ಮತ್ತು ಶ್ಯಾನುಭೋಗ ಪದಗಳೂ, ಸ್ಥಾನಿಕ ಪದವೂ, ಏಕಾರ್ಥದವುಗಳಲ್ಲ" ಎಂದೂ ಬರೆಯುತ್ತಾರೆ. ಶ್ರೀನಿವಾಸರಾಯರು ಜಾತಿ ಸ್ಥಾನಿಕರನ್ನು (ದೇವಕಾರಿ ಗಳನ್ನು) ಜಿಲ್ಲಾಧಿಕಾರ ಸ್ಥಾನಕ್ಕೆ ಏರಿಸಬೇಕೆಂದು, ಪಾಟಲೀಪುತ್ರದಿಂದ ಸ್ಥಾನಿಕವೆಂಬ ಜಿಲ್ಲಾಧಿಕಾರ ಹೊತ್ತು ತಂದ ಪಾಟಾಳಿಗಳನ್ನು ಬೇರೆ ಇಡಲು ಸಾಧ್ಯವಿಲ್ಲೆಂದು ಸಾಧಿ ಸುತ್ತಿದ್ದಾರೆ. ಈ ಲೇಖಕರ ವಿರುದ್ಧವಾದ ಈ ವಾದಗಳಿಂದ ಒಂದು ಮಾತು ತೀರ್ಮಾನವಾಗುತ್ತದೆ. ಅದು ಏನೆಂದರೆ "ಈ ಲೇಖಕರು ಏನಿದೆಯೋ? ಆ ಸತ್ಯಸ್ಥಿತಿ ಯನ್ನು ಬರೆಯಲು ಹೊರಟಿಲ್ಲ. ತಮಗೆ ಏನು ಬೇಕೋ? ಆ ಉದ್ದೇಶ ಸಾಧನೆಗಾಗಿ

ಬೇರೆ ಬೇರೆ ವಿಧಾನವನ್ನೂ ಸಹ ಮಾಡುತ್ತಾರೆ. ಅಂತೂ ಪಾಟಾಳಿಗಳೆಂದರೆ ಸ್ಥಾನಿಕ ಜಾತಿಯವರೇ ಎಂಬುದರ ಬಗ್ಗೆ ಇನ್ನು ಮೇಲೆ ಸಂಶಯ ಉಳಿಯಲಾರದು. ಗುರು ರಾಜ ಭಟ್ಟರು ಸಹ ಸಹ್ಯಾದ್ರಿಯಲ್ಲಿ ಉಕ್ತವಾದ ಪಾಟಾಳಿ ಉತ್ಪತ್ತಿಯನ್ನು ತುಳು ನಾಡು ಪುಟ 109ರಲ್ಲಿ ನಿರಾಕರಿಸುತ್ತಾ, ಸಹ್ಯಾದ್ರಿಯಲ್ಲಿ ಉಕ್ತವಾದ ಸದರಿ ಪಾಟಾಳಿ ಉತ್ಪತ್ತಿ ಅಧ್ಯಾಯದಿಂದ ಸ್ಥಾನಿಕರಿಗೆ ಹಾನಿ ತಟ್ಟುತ್ತದೆಯೆಂತ ಭಾವಿಸಿದ್ದಾರೆ. "ಪಾಟಾಳಿಯು ದೇವಸ್ಥಾನದ ಗೌರವಸ್ಥ ಉದ್ಯೋಗಸ್ಥನಾಗಿದ್ದು ಜಾತಿ ನಿರ್ದೇಶಕ ನಲ್ಲ"ವೆಂದು ಸಹ ಬರೆಯುತ್ತಾರೆ. ಸ್ಥಾನಿಕ, ಪಾಟಾಳಿ ಪದಗಳು ಸಮಾನಾರ್ಥಕ ವೆಂಬ ಅಭಿಪ್ರಾಯವೂ ಅವರಿಗೆ ಉಂಟು ಎಂದು ಇದರಿಂದ ತಿಳಿಯಬಹುದು. ರೂಢಿಗೆ ವ್ಯತಿರಿಕ್ತವಾಗಿರಲು ಭಟ್ಟರಿಗಾದರೂ ಹೇಗೆ ಸಾಧ್ಯ! ರಿಸರ್ಚ್ ಮಾಡುವವ ರೆಂಬ ಹೆಮ್ಮೆಯಿಂದ ಶೃಂಗೇರಿ ಮಠದ ರಾಯಸದ ಮೇಲೆ ವೃಥಾ ಮಾತು ಮಾಡಿ ದ್ದಾಗಿದೆ.

ಪಾಟಾಳಿ ಉತ್ಪತ್ತಿಯನ್ನು ಉತ್ತರ ಸಹ್ಯಾದ್ರಿ ಖಂಡದಲ್ಲಿ ವಿವರಿಸಿಯದೆ ಎನ್ನು ತ್ತಾರೆ. ಮತ್ತು ಅದರ ಮಜಕೂರು ಸಹ ವಿವರಿಸಿ ತುಳುನಾಡು ಪುಟ 109ರಲ್ಲಿ ಬರೆದಿರುತ್ತಾರೆ. ಥರ್ಸನ ಕುನ್ಹಾರವರು ಪ್ರಕಟಿಸಿದ ಪುಸ್ತಕದಲ್ಲಿ 18 ಮತ್ತು 19ನೇ ಅಧ್ಯಾಯದಲ್ಲಿ ಗುರುರಾಜ ಭಟ್ಟರು ಬರೆದಂತೇನೆ ಪಾಟಾಳಿ ಉತ್ಪತ್ತಿಯು ಉಕ್ತ ವಾಗಿದೆ. ಅಂದಮೇಲೆ ಬರೆದ ಮತ್ತು ಮುದ್ರಿತ ಸಕಲ ದೇಶದ ಸಹ್ಯಾದ್ರಿ ಖಂಡದ ಪುಸ್ತಕದಲ್ಲಿ ಸಹ ಪಾಟಾಳಿ ಉತ್ಪತ್ತಿ ಬರೆದಿರುತ್ತದೆ ಎಂದಾಯಿತು. ಪಾಟಾಳಿ ಉತ್ಪ ತ್ತಿಯು ಪರಿಶುದ್ಧವಲ್ಲ. ಇದು ಭಟ್ಟರಿಗೆ ಒಪ್ಪಿತ. ಆದ್ದರಿಂದಲೇ ಅದನ್ನು ನಿರಾಕರಿ ಸಲು ವ್ಯರ್ಥ ಚಡಪಡಿಸುತ್ತಾರೆ. ಅದಕ್ಕವರು ಕೊಡುವ ಕಾರಣವೆಂದರೆ "ಪಾಟಾಳಿ" ಇದು ಒಂದು ಪಂಗಡ ವ ಜಾತಿಯ ಹೆಸರಲ್ಲ. ಒಂದು ಉದ್ಯೋಗದ ವಾಚಕ ಶಬ್ದ. ಏಕೆಂದರೆ ಶೀವಳ್ಳಿಯವರೂ ಕೆಲವು ದೇವಸ್ಥಾನದಲ್ಲಿ ಪಾಟಾಳಿಗಳಾಗಿರುತ್ತಾರೆ. ಎಂದಿಷ್ಟೇ. ಇದು ಜನರನ್ನು ವಂಚಿಸುವ ಗತ್ತು ಎಂಬುದಾಗಿ ಸರ್ವಸಾಧಾರಣ ಎಲ್ಲರೂ ತಿಳಿಯುವಂತಿದೆ. ಸ್ವತಃ ತಾನೇ ಪೇಜು 19ರಲ್ಲಿ (1966) ದೇವಸ್ಥಾನದ ಸೇವಕ ವರ್ಗವನ್ನು ಮೂರಾಗಿ ವಿಂಗಡಿಸಿ ಒಂದು ಬ್ರಾಮ್ಹಣರ ವರ್ಗ, ಮೇಲುಶಾಂತಿ, ಕೀಳುಶಾಂತಿ, ತಂತ್ರಿ ಎಂದೂ ಎರಡು ಸ್ಥಾನಿಕ ಜಾತಿಯವರು-ಪಾದಮೂಲಿ. ಕೊಟ್ಟಾರಿ, ಶಾನಭೋಗ, ಪಾಟಾಳಿ, ಎಂದು ಮೂರು ಶೂದ್ರ ಜಾತಿಯ ಮೊಯಿಲಿ ಯವರು, ಪದಾರ್ಥಿ, ಅಡಿಪು, ಮುಕ್ಕಾಲುಪಟ್ಟಿ ಎಂದೂ ವಿಂಗಡಿಸಿ ತೂರಿಸಿರುತ್ತಾರೆ. ಕೆಲವೊಂದು ದೇವಸ್ಥಾನಗಳಲ್ಲಿ ಜಾತಿ ಪಾಟಾಳಿಗಳು ಕೆಲಸವನ್ನು ಬಿಟ್ಟ ಮೇಲೆ ದೇವರ ಕೆಲಸ ನಿಲ್ಲಬಾರದೆಂದು ಶೀವಳ್ಳಿಯವರು ಟೆಂಪರರಿಯಾಗಿ ಪಾಟಾಳಿ ಕೆಲಸ ಮಾಡಿರಬಹುದು. ಅದು ಟೆಂಪರರಿ ಎಂದು ಅವರ ಉಲ್ಲೇಖದಿಂದಲೇ ತಿಳಿಯುತ್ತದೆ. ನಾರಾಯಣ ಪೆರೋಡಿತ್ತಾಯ ಎಂಬವನು 1890ರಲ್ಲಿ ಪುತ್ತೂರು ದೇವಸ್ಥಾನದ ಪಾಟಾಳಿ ಕೆಲಸಮಾಡುತ್ತಿದ್ದನು. ಅದೇ ದೇವಸ್ಥಾನದಲ್ಲಿ 1916ನೇ ಇಸವಿಯಲ್ಲಿ

ಸುಬ್ರಾಯ ನೆಲ್ಲಿತ್ತಾಯ, ಪಾಟಾಳಿ ಕೆಲಸ ಮಾಡುತ್ತಿದ್ದನು—ಹೀಗೆ ಬರೆದಿರುತ್ತಾರೆ. ಆಗ ಅವರನ್ನು ಪಾಟಾಳಿಗಳೆಂದು ಕರೆದಿರಲೂಬಹುದು. ಆದರೆ ಅದು ಗೌಣಶಬ್ದ. ಪಾಟಾಳಿಯಂತೆ ಕೆಲಸಮಾಡುವವ ಎಂದೆ ಅದರ ಅರ್ಥ, ಪಾಟಾಳಿಯೇ ಎಂದರ್ಥವಲ್ಲ. ದಡ್ಡ ಎಂಬ ಅರ್ಥ ವಿವಕ್ಷೆಯಿಂದ ಮನುಷ್ಯನನ್ನು "ಕೋಣ" ಎಂದರೆ ಆತನಿಗೆ ಕೋಡು ಮೂಡಬೇಕಾಗಿಲ್ಲ. ಬಾಲ ಇರಬೇಕಾಗಿಲ್ಲ. ಆ ಕೋಣ ಶಬ್ದಕ್ಕೆ ದಡ್ಡ ಎಂದಿಷ್ಟೇ ಅರ್ಥ. ಆದರೆ ಗೌಣಾರ್ಥ ಶಬ್ದ ಪ್ರಯೋಗ ಮಾಡುವಲ್ಲಿ ಮುಖ್ಯಾರ್ಥ ಮಾತ್ರ ಬೇರೆ ಇರಲೇ ಬೇಕಾಗುವುದು. ಶೃಂಗೇರಿ ಮಠದ ರಾಯಸದಿಂದಲೂ, ಶ್ರೀನಿವಾಸ ರಾಯರ ಪೂರ್ವೋಕ್ತ ಲೇಖದಿಂದಲೂ, ಲೋಕರೂಢಿಯಿಂದಲೂ, ಸ್ಥಾನಿಕ ಪಂಗಡದವರೇ ಪಾಟಾಳಿಗಳೆಂದು ಸಿದ್ಧವಾಗಿದೆ. ಸಹ್ಯಾದ್ರಿ ಉತ್ತರ ಖಂಡದಲ್ಲಿ ಪಾಟಾಳಿಗಳ ಉತ್ಪತ್ತಿ ಪರಿಶುದ್ಧವಲ್ಲವೆಂದು ಬರೆದಿದೆಯಾಗಿ ಭಟ್ಟರು ಒಪ್ಪಿದ್ದಾರೆ. ಅದನ್ನು ನಿರಾಕರಿಸಲು ಕೊಟ್ಟಕಾರಣ ಅಸಮರ್ಥವೆಂದು ತಿರಸ್ಕೃತವಾಯಿತು. ಅಂದ ಮೇಲೆ ಸಹ್ಯಾದ್ರಿ ಖಂಡದ ವಾಕ್ಯಪ್ರಕಾರ ಪಾಟಾಳಿ ಉತ್ಪತ್ತಿ ಒಪ್ಪಿಕೊಳ್ಳಲು ಆತಂಕವೇನು? ನಮಗೆ ಬೇಕಾಗಿಲ್ಲ ವೆಂದರೆ ಆದೀತೇ? ಶೃಂಗೇರಿ ಮಠದ ರಾಯಸದಲ್ಲಿ ಸಹ "ವಿವಾದಿ ಜನರು" ಎಂತ ನಿರ್ದೇಶಿಸಿ ವಿವಾದವನ್ನು ಒಪ್ಪಿರುತ್ತಾರೆ. ವಿವಾದವನ್ನು ನಿರಾಕರಿಸಲಿಲ್ಲ. ಬ್ರಾಹ್ಮ ಣ್ಯದಲ್ಲಿ ವಿವಾದವಿರುವಾಗ ಚವುಕಶಿಮಾಡಿ ದಾಸೀಪುತ್ರರಲ್ಲವೆಂದು ನಿರ್ಣಯಿಸಿ ರಾಯಸ ಕೊಡಬೇಕಾಗಿತ್ತು. ಪಾತಿತ್ಯ ಸಂಪಾದಿತವಾದ ಯಾವ ದೋಷವೂ ಈ ಜನರಲ್ಲಿ ಇರುವುದಿಲ್ಲವೆಂದು ನಿರ್ಧರಿಸಿ ಹೇಳಬೇಕಾಗಿತ್ತು.

ಹಾಗೆ ತೀರ್ಮಾನಿಸಿಲ್ಲ. ನಿರ್ಧರಿಸಿಲ್ಲ. ಚಿರಕಾಲದಿಂದಲೂ ನಡೆದು ಬಂದಿದ್ದ, ಲೋಕದಲ್ಲಿ ರೂಢಿಯಲ್ಲಿ (ಚಾಲ್ತಿಯಲ್ಲಿ) ಇರುತ್ತಿದ್ದ, ಬಹು ಪುಸ್ತಕದಲ್ಲಿ ಬರೆದಿದ್ದ ಒಂದು ವಿಷಯವನ್ನು "ಅದು ಸತ್ಯವಲ್ಲ" ಎಂತ ನಿರ್ಧರಿಸುವುದು ಸುಲಭ ಸಾಧ್ಯ ಕೆಲ ಸವೂ ಅಲ್ಲ. ಅದನ್ನರಿತೇ ಶೃಂಗೇರಿ ಮಠದವರು ಅಷ್ಟು ಉದ್ದ ನೀರಿಗೆ ಇಳಿಯದೆ ಹಾರಿಕೆಯ ಉತ್ತರದಲ್ಲಿ ಚಾಣಾಕ್ಷತನದಿಂದ ಮೊಗಂಮಾತು ಉಪಯೋಗಿಸಿರುತ್ತಾರೆ. "ಇದುವರೆಗೆ ಯಾರಿಂದಲೂ, ಯಾವ ರೀತಿಯಿಂದಲೂ, ಪಾತಿತ್ಯವು ನಿರೂಪಿಸಲ್ಪಟ್ಟಿ ರುವುದಿಲ್ಲ" ಎಂತ ಬರೆಯುತ್ತಾರೆ. ಇದಾದರೂ ಸತ್ಯವೋ? ಭಟ್ಟರೇ 10?ನೇ ಪೇಜಿ ನಲ್ಲಿ ಪಾಟಾಳಿ ಉತ್ಪತ್ತಿ ಪರಿಶುದ್ಧವಲ್ಲ. ಸಹ್ಯಾದ್ರಿ ಖಂಡದ 23ನೇ ಅಧ್ಯಾಯದಲ್ಲಿ ವಿವರಿಸಿಯದೆ ಎನ್ನುತ್ತಾರೆ. ಇತರರ ಪುಸ್ತಕಗಳಲ್ಲಿಯೂ ಪಾತಿತ್ಯ ನಿರೂಪಿಸಲ್ಪಟ್ಟಿದೆ. ಆದುದರಿಂದ ರಾಯಸದ "ಪಾತಿತ್ಯವು ನಿರೂಪಿಸಲ್ಪಟ್ಟಿರುವುದಿಲ್ಲ"ವೆಂಬ ಶಬ್ದಕ್ಕೆ ಅರ್ಥ ವಿಲ್ಲ. ಸಹ್ಯಾದ್ರಿಖಂಡ ಅಪ್ರಮಾಣವೆಂದರೆ ಸಾಲದು. ಸರಿಯಾದ ಕಾರಣ ತೋರಿಸಿ ಉಪಪಾದನೆಯಾಗಬೇಕು. ಅದು ಆಗಿಲ್ಲ. ಪ್ರತ್ಯುತ ಸಹ್ಯಾದ್ರಿ ಖಂಡದ ಮಾತಿಗೂ ಸ್ಥಾನಿಕರ ನಡಾವಳಿಗೂ ಐಕಮತ್ಯ ಇರುವುದರಿಂದ ಪ್ರಾಮಾಣ್ಯವೇ ಸುಲಭಸಾಧ್ಯ. ಚಿರಕಾಲದ ರೂಢಿ, ಸಹ್ಯಾದ್ರಿಖಂಡದ ಸಕಲ ಪ್ರತಿಗಳ ಉಲ್ಲೇಖ, ಹವೀಕ, ಕೋಟ, ಶಿವಳ್ಳಿಯವರ ಒಪ್ಪಿತ ಇವುಗಳಿಂದ ಸಿದ್ಧವಾದ ಪಾಟಾಳಿ ಉತ್ಪತ್ತಿಯು ನಿರಾಕೃತ

ವಾಗಿಲ್ಲ. ಡಿಸ್ಟ್ರಿಕ್ಟ್ ಮ್ಯಾನುವೇಲಿನಲ್ಲಿ ಬಹು ಜನರನ್ನು ವಿಚಾರಿಸಿ ಬ್ರಾಹ್ಮಣರಲ್ಲ; ಬೇರೆ ಜಾತಿಯೆಂದು ತೀರ್ಮಾನಿಸಿ ಬರೆಯಲಾಗಿದೆ. ಕೋರ್ಟಿನಲ್ಲಿ ಬ್ರಾಮ್ಹಣರಲ್ಲ ವೆಂದು ತೀರ್ಮಾನವಾಗಿದೆ. ಸದರಿ ತೀರ್ಮಾನವನ್ನು ಪರಿಶಿಷ್ಟದಲ್ಲಿ ಕಾಣಬಹುದು. ಇದರಿಂದ ಸ್ಥಾನಿಕ ಜಾತಿಯವರಲ್ಲಿ ಬೇರೆ ಬೇರೆ ತರದ ಸಂಕರ ಜಾತಿಯವರು ಸೇರಿ ಕೊಂಡಿದ್ದಾರೆಂದು ತಿಳಿಯಬಹುದು. ಒಂದೆ ತರಹದ ಉತ್ಪತ್ತಿಯವರು ಮಾತ್ರವಲ್ಲ.

## ಶಿವಬ್ರಾಮ್ಹಣರು

ಶ್ರೀಗುರುರಾಜ ಭಟ್ಟರೂ ಮತ್ತು ಶ್ರೀನಿವಾಸ ರಾಯರೂ ಸ್ಥಾನಿಕ ಜಾತಿಯವ ರನ್ನು ಶಿವಬ್ರಾಮ್ಹಣರೆಂದು ಹೇಳುತ್ತಿದ್ದಾರೆ. ಆದರೆ ಈ ಹೆಸರು ಪುರಾತನದಿಂದ ಬಂದದ್ದು ಎಷ್ಟುಮಾತ್ರಕ್ಕೂ ಅಲ್ಲ. 1874ನೇ ಇಸವಿಯ ನಂತರ ಹಚ್ಚಿಕೊಂಡದ್ದು ಅಂತ ನಿರ್ವಿವಾದ ಸಿದ್ಧವಾಗಿದೆ. "ಗೌಡಸಾರಸ್ವತ ಡಿಸ್ಟ್ರಿಕ್ಟ್ ಮುನ್ಸೀಫರೊಬ್ಬರು ಸ್ಥಾನಿಕರೆಂದು ಹೇಳಿಕೊಳ್ಳುವುದರ ಬದಲಿಗೆ ಸ್ಮಾರ್ತರಾದ್ದರಿಂದ ಶಿವಬ್ರಾಮ್ಹಣರೆಂದು ಹೇಳಿಕೊಳ್ಳಬಹುದು ಎಂತ ಸೂಚನೆ ಕೊಟ್ಟರು. ಕೀಳು ಜಾತಿಯವರು ಸ್ಥಾನಿಕ ರೆಂದು ಹೇಳಿಕೊಳ್ಳುವುದರಿಂದ ಮುನ್ಸೀಫರ ಸೂಚನೆ ಸರಿಯಾದದ್ದೆಂದು ಸ್ಥಾನಿಕ ಸಂಗಡದವರು ಆ ವಿಷಯ ಸಂಪೂರ್ಣ ವಿಚಾರಿಸದೆ ತಾ. 6—3—1874ರಲ್ಲಿ ಜಿಲ್ಲಾ ಗಜೇಟಿನಲ್ಲಿ ಪ್ರಚುರಪಡಿಸಿದ ನೋಟೀಸಿನ ಮೂಲಕ ಶಿವಬ್ರಾಮ್ಹಣರೆಂದು ಹೇಳಿ ಕೊಳ್ಳಲಾರಂಭಿಸಿದರು. ಇದರಿಂದ ನಷ್ಟವಾದದ್ದೇ ಹೊರತು ಸ್ವಲ್ಪವಾದರೂ ಆದಾಯ ವಿಲ್ಲದೆ ಪರಿಹಾಸಕ್ಕೆ ಗುರಿಯಾಯಿತು" ಎಂತ ಸ್ಥಾ. ಬ್ರಾ. 27 ಪುಟದಲ್ಲಿ ಬರೆಯು ತ್ತಾರೆ ಶ್ರೀನಿವಾಸ ರಾಯರು. ಈ ಹೇಳಿಕೆಯಿಂದ 1874ನೇ ಇಸವಿಯ ಪೂರ್ವದಲ್ಲಿ ಸ್ಥಾನಿಕರಾಗಿಯೇ ಇದ್ದರು. ಶಿವಬ್ರಾಮ್ಹಣರಾಗಿರಲಿಲ್ಲ. ಮಾಲೆಯವರು ಸಹ ಸ್ಥಾನಿಕರೆಂಬ ಹೆಸರಿನಿಂದ ಕರೆಯ ಹತ್ತಿದ ಮೇಲೆ ಆ ಸ್ಥಾನಿಕ ಜಾತಿಯನ್ನು ಮಾಲೆ ಯವರ ಮೇಲೆ ಹೊರಿಸಿ ತಾವು ಬ್ರಾಮ್ಹಣರಾಗಲು ಹವಣಿಸಿ ಆ ಜಾತಿಯಿಂದ ಪಾರಾ ಗಲು ಈ ಸಂಚು ಹೂಡಿರಬಹುದು. ಶಿವಬ್ರಾಮ್ಹಣರು ಕ್ರಮೇಣ ಶೀವಳ್ಳಿ ಬ್ರಾಮ್ಹಣ ರಾಗಲೂಬಹುದಷ್ಟೇ? ಅಂತೆಯೇ ಶಾಸನಗಳಲ್ಲಿ ಕಂಡು ಬರುವ ಶಿವಬ್ರಾಮ್ಹಣರೆಂದರೆ ತಾವೇ ಎಂದು ಸಾಧಿಸಲೂ ಆಸ್ಪದ ಉಂಟಷ್ಟೇ? ಆದರೆ ಶಿವಬಾಮ್ಹಣ ಶಬ್ದದಿಂದ ಶೀವಳ್ಳಿ ಬ್ರಾಮ್ಹಣರಾಗುವುದಂತು ಇರಲಿ. ಕಾಶ್ಮೀರದಿಂದ ಬಂದ ಕಾಳಾಮುಖ ಶೈವರೆಂಬ ಸ್ಪಷ್ಟ ಬ್ರಾಹ್ಮಣೇತರರಾಗಬೇಕಾದ ಪ್ರಸಂಗ ಒದಗಿಬಂದದ್ದರಿಂದ ಇದೀಗ "ನಷ್ಟವಾಯಿತೇ ವಿನಹ ತುಸುವಾದರೂ ಆದಾಯವಾಗಲಿಲ್ಲ" ಎಂಬ ಅರಿವು ಮೂಡಿತು. ಮತ್ತು ಮೊದಲು ಶಿವಬ್ರಾಮ್ಹಣರೆಂದುಕೊಳ್ಳುವಾಗ ತಾವು ಶಾಸನದ ಶಿವಬ್ರಾಮ್ಹಣ ರೆಂದು ಸಾಧಿಸುವ ಗತ್ತು ಅದರಲ್ಲಿ ಅಡಗಿತ್ತು, ಶಾಸನದ ಶಿವಬ್ರಾಮ್ಹಣರು ಕಾಳಾ ಮುಖರು ಎಂದು ತೀರ್ಮಾನವಾದಾಗ ಮತ್ತೆ ತಾವು ಶೂದ್ರರಾಗುವ ಪ್ರಸಂಗ ಬಂದ

ದ್ದರಿಂದ "ಈ ಶಿವಬ್ರಾಹ್ಮಣರೆಂದರೆ (ಸ್ಥಾನಿಕರೆಂದರೆ) ಶಾಸನದ ಶಿವಬ್ರಾಹ್ಮಣರಲ್ಲ. ಒಂದಕ್ಕೊಂದು ಭ್ರಮಿಸಕೂಡದು" ಅಂತಲೂ ಬರೆಯಬೇಕಾಯಿತು. ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ಹೀಗೆ ಇಬ್ಬರನ್ನೂ ಬೋಧಿಸುವ ಸ್ಥಾನಿಕ ಶಬ್ದವು ತಮ್ಮಲ್ಲಿರುವಾಗ ಅದನ್ನು ಬಿಟ್ಟು ಕೇವಲ ಬ್ರಾಹ್ಮಣೇತರ ಬೋಧಕ ಶಿವಬ್ರಾಹ್ಮಣ ಶಬ್ದವನ್ನು ಹಚ್ಚಿಕೊಂಡದ್ದರಿಂದ ಅವಿವೇಕಿಗಳೆಂದು ಪರಿಹಾಸವೂ ಆಯಿತು. ಹೀಗೆ ಅವರ ವಾಕ್ಯದ ಅಭಿಪ್ರಾಯವಾಗುತ್ತದೆ.

1957ರಲ್ಲಿ ಸ್ಥಾನಿಕ ಬ್ರಾಹ್ಮಣರು ಎಂಬ ಪುಸ್ತಕ ಬರೆಯುವಾಗ ಶಿವಬ್ರಾಹ್ಮಣರೆಂದು ಹೆಸರು ಇಟ್ಟುಕೊಳ್ಳಲಿಕ್ಕೆ ಸ್ಫೂರ್ತಿ ಹೊಂದಿದ್ದು ಒಬ್ಬ ಗೌಡಸಾರಸ್ವತರ ಮಾತಿನಿಂದ ಎಂದು ಇದೆ. 1966ರಲ್ಲಿ ಬರೆದ ತುಳುನಾಡು ಪುಸ್ತಕದ ಪುಟ 115ರಲ್ಲಿ ಸನತ್ಕುಮಾರ ಸಂಹಿತೆಯಿಂದ ಆರಿಸಿದ್ದು ಅಂತ ಬರೆದಿದೆ. ಒಬ್ಬ ಗೌಡಸಾರಸ್ವತನ ಮಾತಿಗಿಂತ ಒಂದು ಪುರಾಣವನ್ನು ಅನುಸರಿಸುವುದು ಗೌರವದ ಸಂಗತಿಯಷ್ಟೆ? ಇದರಿಂದ ತಮ್ಮ ದೊಡ್ಡಸ್ತಿಕೆ ದೆಸೆಯಿಂದ ಅಲ್ಲಲ್ಲಿ ಕಂಡುಬರುವ ಮಹತ್ವದ ಸಂಗತಿಗಳನ್ನು ತಮ್ಮಲ್ಲಿ ಹಚ್ಚಿಕೊಳ್ಳುವ ಹವ್ಯಾಸವನ್ನು ಇಟ್ಟುಕೊಂಡಿದ್ದಾರೆ ಎಂದಾಯಿತು. ಅದು ತಪ್ಪು ಎಂದು ಅಲ್ಲ. ಆದರೂ ಕ್ವಚಿತ್ ಅನರ್ಥಕಾರಿ ಸಹ ಆಗುತ್ತದೆ.

ಶಾಸನಗಳಲ್ಲಿ ಬರೆದಿರುವ ಸ್ಥಾನಿಕರ ಸ್ಥಾನಮಾನಗಳನ್ನು ನೋಡಿ ಶಬ್ದ ಸಾಮ್ಯದಿಂದ ತಾವೂ ಅದೇ ಸ್ಥಾನಿಕರೆಂದು ತಮ್ಮಲ್ಲಿ ಅವುಗಳನ್ನು ಆರೋಪಿಸಿಕೊಂಡು ಆ ಸ್ಥಾನಮಾನಗಳನ್ನು ಅಪೇಕ್ಷಿಸಿದ್ದುಂಟು. ಅವು ಇಲ್ಲದಿದ್ದುದರಿಂದ ಶಿವಳ್ಳಿಯವರು ಕಸಿದುಕೊಂಡರೆಂದು ಭಾವಿಸಿ ಮನಸ್ಸಿನಲ್ಲಿ ನೊಂದುಕೊಂಡು ತಮ್ಮ ಪಾಲಿಗೆ ಉಳಿದಿರುವ ಪಾಟಾಳಿತನವನ್ನು ಅಸಹ್ಯವಾಗಿ ತೊರೆಯಹತ್ತಿದರು. ಆಗ ಮಲೆಯಾಳದ ನಂಬೀಶರೆಂಬ ಅಂಬಲವಾಸಿಗಳು ಬಂದು ದೇವಕಾರಿ ಕೆಲಸ ಮಾಡಹತ್ತಿದಾಗ ಅವರನ್ನು ಸ್ಥಾನಿಕರೆಂದು ಕರೆಯಹತ್ತಿದರು. ಆಗ ಕೆಲ ಸ್ಥಾನಿಕ ಮುಖಂಡರು ವಿಚಾರ ಮಾಡಿ ಶಿವಬ್ರಾಹ್ಮಣರೆಂದು ಹೆಸರಿಸಲು ನಿರ್ಧರಿಸಿದರು. ಇದೇ ಅಭಿಪ್ರಾಯ ತುಳುನಾಡು ಪುಸ್ತಕದಲ್ಲಿ ಸಹ ಕಾಣಬಹುದು. ಅಂತೂ ಶಿವಬ್ರಾಹ್ಮಣರೆಂಬ ಹೆಸರು ಆನುವಂಶಿಕವಲ್ಲ. ಇದು ನಿಜವೆಂದು ಸಿದ್ಧವಾಯಿತು.

## ಶೃಂಗೇರಿ ಮಠದ ಶಿಷ್ಯರು

ಸ್ಥಾನಿಕ ಪಂಗಡದವರು ಶೃಂಗೇರಿ ಮಠದ ಶಿಷ್ಯರೆಂದು ಭಟ್ಟರೂ, ರಾಯರೂ ಬರೆಯುತ್ತಾರೆ. ಆದರೆ ಅವರ ಆ ಲೇಖನದಿಂದಲೇ ಶೃಂಗೇರಿ ಮಠದ ಶಿಷ್ಯರಲ್ಲವೆಂತಲೂ ಇದೊಂದು ದುಃಸ್ಸಾಧನೆಯಂತಲೂ ಹೇಳಬೇಕಾಗುತ್ತದೆ. ಮೊದಲನೇದಾಗಿ ಶೃಂಗೇರಿ ಮಠದಿಂದ ತಾವು ಶೃಂಗೇರಿ ಮಠದ ಶಿಷ್ಯರೆಂದು ರಾಯಸ ತರಿಸಿದ್ದೇ ಸಂದೇಹಕ್ಕೆ ಕಾರಣ. ಅಕಸ್ಮಾತ್ ಯಥಾಸ್ಥಿತ ಸಮಾಜದ ಮುಂದೆ ರಾಯಸ ತಂದು ರುಜುವಾತು

ಮಾಡುವುದು ಸ್ವಾಭಾವಿಕ ಶಿಷ್ಯರಿದ್ದಲ್ಲಿ ಅನಾವಶ್ಯಕವೇ ಸರಿ. ಹೊಸತಾಗಿ ತಾವು ಬ್ರಾಹ್ಮಣರೆಂದಾಗ ಇತರರು ತಕರಾರು ಮಾಡುತ್ತಾರೆ. ಆಗ ಯುರೋಪಿಯನರಂಥ ಪರಕೀಯರ ಮುಂದೆ ರುಜುವಾತು ಮಾಡುವುದಕ್ಕೆ ರಾಯಸದ ಉಪಯೋಗವಾಗುತ್ತದೆ. ವಿಶ್ವಕರ್ಮ ಬ್ರಾಹ್ಮಣರೆಂಬ ಬಡಗಿಯರು ಚಿತ್ತೂರು ಕೋರ್ಟಿನಲ್ಲಿ ಶೃಂಗೇರಿ ಮಠದ ರಾಯಸ ಹಾಜರು ಮಾಡಿ ತಮ್ಮ ಕೇಸು ಗೆದ್ದಿದ್ದಾರಂತೆ. ತೋಟಿಗರು ತಾವು ಬ್ರಾಹ್ಮಣರೆಂದು ಶೃಂಗೇರಿ ಮಠದ ರಾಯಸ ತಂದು ದಾವಣಗೆರೆ ಕೋರ್ಟಿನಲ್ಲಿ ಹಾಜರುಪಡಿಸಿ ಸಾಧಿಸಿದ್ದುಂಟು. ಇಂಥಾ ಉದಾಹರಣೆಗಳಿಂದ ತತ್ತದ್ದೇಶೀಯ ಜನರು ಪರಂಪರಾಗತ ಪದ್ಧತಿಯಂತೆ ಯಾರನ್ನು ಬ್ರಾಹ್ಮಣರ ಕೂಡುಕಟ್ಟಿಗೆ ಸೇರಿಸಿಕೊಳ್ಳಲು ಒಪ್ಪುವುದಿಲ್ಲವೊ ಅಂಥವರು ಶೃಂಗೇರಿ ಮಠಕ್ಕೆ ಹೋದರೆ ಸರಿ, ಯಾರಾದರೂ ಚಿಂತೆಯಿಲ್ಲ, ಬ್ರಾಹ್ಮಣರೆಂದು ರಾಯಸ ಸಿಗುತ್ತದೆ, ಎಂದು ಊಹಿಸಬಹುದು. ಅವರೋ ಜಗದ್ಗುರುಗಳು. ಮಾತಾಡುವಂತೆ ಇಲ್ಲ.

## ಮಂಗಳೂರು ಜಿಲ್ಲಾ ಸದರಮೀನ ಕೋರ್ಟಿ ತೀರ್ಪು

ಸನ್ 1844ನೇ ಸದರಿ ಕೋರ್ಟಿನ ಫೈಸಲು ನಂ. 43

ಬಂಟ್ವಾಳ ತಾಲೂಕು ಸುಬ್ರಹ್ಮಣ್ಯ ಕಸುಬೆಯಲ್ಲಿರುವ ವಿದ್ಯಾರಾಜತೀರ್ಥ ಸ್ವಾಮಿಜೀಯವರು . . . . } ವಾದಿ

ಸುಬ್ರಾವ ನಂತರ ತಿಮ್ಮಪ್ಪಯ್ಯ — ವಕೀಲ,

ವಿರುದ್ಧ

ಬಂಟ್ವಾಳ ತಾಲೂಕು ಸುಬ್ರಹ್ಮಣ್ಯ ಕಸುಬೆಯಲ್ಲಿರುವ ಸ್ಥಾನಿಕ<br>
ಹೆಬ್ಬಾರ ನಾರಣಪ್ಪ ಸ್ಥಾ. . . . . . .<br>
ಹೆಬ್ಬಾರ ನಾರಾಯಣ ಸ್ಥಾ. . . . . . .<br>
ಹೆಬ್ಬಾರ ಕೃಷ್ಣ ಸ್ಥಾ. . . . . . .<br>
ಹೆಬ್ಬಾರ ಗುಂಡಾ ಸ್ಥಾ. . . . . . .<br>
ಪಾಟಾಳಿ ರಾಮಪ್ಪ ಸ್ಥಾ. . . . . . . } ಪ್ರತಿವಾದಿರು

ಲಕ್ಷ್ಮಯ್ಯ — ವಕೀಲ

**ಇದರಲ್ಲಿ "ಆ ದೇವಸ್ಥಾನಕ್ಕೆ ಗುರು ಮರಿಯಾದಿ ಭಾವದಲ್ಲಿ ವಾದಿರು ಸ್ಥಿರವಾದ ಹಕ್ಕು ಉಂಟಾದವರಾಗಿಯೂ ೧ನೇ ೨ನೇ ೩ನೇ ೪ನೇ ಪ್ರತಿವಾದಿರಿಗೆ ಗುರುಗಳಾಗಿಯೂ ಸಹಾ ಇರುತ್ತಾರೆ, ಎಂದು ಜಡ್ಜ್ಮೆಂಟಿನಲ್ಲಿ ಸ್ಪಷ್ಟ ವಾಕ್ಯವಿದೆ. ಇದರಿಂದ 1944ನೇ ಇಸವಿಯಲ್ಲಿ ಶ್ರೀವಿದ್ಯಾರಾಜರ ಕಾಲದಲ್ಲಿ ಸ್ಥಾನಿಕರು ಶ್ರೀಸುಬ್ರಹ್ಮಣ್ಯ ಮಠದ ಶಿಷ್ಯರಾಗಿದ್ದರು-**

"ಸ್ಥಾನಿಕ ಬ್ರಾಮ್ಹಣರು" ಪುಸ್ತಕ ಪುಟ 17ರಲ್ಲಿ ಶ್ರೀನಿವಾಸರಾಯರು ಸ್ವತಹ ಬರೆಯುತ್ತಾರೆ. "1869ನೇ ಇಸವಿಯಲ್ಲಿ ಸುಬ್ರಮ್ಹಣ್ಯ ಮಠದ ಸ್ವಾಮಿಜಿಯವರಾದ ವಿದ್ಯಾನಂದ ಶ್ರೀಪಾದಂಗಳವರು ಸ್ಥಾನಿಕ ಸಂಗಡದ ಪರವಾಗಿ ಕೊಡಗಿನ ಕಮಿಶನರಿಗೆ ಅರ್ಜಿ ಮಾಡಿದ್ದನ್ನು ಕಮಿಶನರು ತಮ್ಮ ಅಧಿಕಾರಕ್ಕೊಳಪಡದ ನಿವಾಸಿಕರ ವಿಷಯದ ಅರ್ಜಿಯೆಂದು ತಮ್ಮ ಎಂಡಾರ್ಸ್‌ಮೆಂಟಃ ನಿಶಿ ವಾಪಾಸು ಮಾಡಿದ್ದನ್ನು ಸ್ವಾಮಿಜಿಯವರು ಸ್ಥಾನಿಕ ಸಂಗಡದವರ ತಿಳುವಳಿಕೆ ಬಗ್ಗೆ ಅವರ ವಶ ಕೊಟ್ಟದ್ದಾರೆ. ಅರ್ಜಿಯ ಸಾರಾಂಶ "ಮಾಲೆಯವರು ಸ್ಥಾನಿಕರೆಂದು ಹೇಳಿಕೊಳ್ಳುತ್ತಿದ್ದಾರೆ. ಅವರು ಬ್ರಾಮ್ಹಣರಲ್ಲ, ಸ್ಥಾನಿಕರು ಬ್ರಾಮ್ಹಣರು. ತಮ್ಮ ಮಠದ ಶಿಷ್ಯರು. ಮಾಲೆಯವರು ಸ್ಥಾನಿಕರೆಂದು ಹೇಳಿಕೊಳ್ಳುವುದರಿಂದ ತಮ್ಮ ಶಿಷ್ಯವರ್ಗದವರಿಗೆ ನಿಂದಾಸ್ಪದವಾದುದರಿಂದ ತಕ್ಕ ಬಂದೋಬಸ್ತು ಮಾಡಬೇಕು" ಎಂಬುದಾಗಿರುತ್ತದೆ. ಅಂದರೆ ಸನ್ 1869ರ ವರೆಗೆ ಸ್ಥಾನಿಕರು ಸುಬ್ರಮ್ಹಣ್ಯ ಮಠದ ಶಿಷ್ಯರಾಗಿದ್ದರು. ಸ್ವಾಮಿಜಿಯವರು ತಮ್ಮ ಶಿಷ್ಯವರ್ಗದವರ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿದ್ದರು. ಸ್ಥಾನಿಕರು ತಮ್ಮ ಗುರು ಮಠದಲ್ಲಿ ತಮಗಾಗುವ ಸುಖದುಃಖಗಳನ್ನು ವಿಜ್ಞಾಪಿಸಿಕೊಳ್ಳುತ್ತಿದ್ದರು. ಇದು ಮೊದಲಿನಿಂದಲೂ ಇರುತ್ತಿದ್ದ ಗುರುಶಿಷ್ಯಭಾವ. ಹೀಗೆ ಗುರುಶಿಷ್ಯಭಾವ ಇರುತ್ತಾ ಇತ್ತು. ಹಾಗೆ ಇರುತ್ತಿದ್ದಿಲ್ಲವಾದರೆ ಮಾಲೆಯವರ ಕೂಡಾ ದ್ವೇಷ ಕಟ್ಟಿಕೊಂಡು "ಸ್ಥಾನಿಕರು ನಮ್ಮ ಮಠದ ಶಿಷ್ಯರು" ಎಂದು ಸುಳ್ಳು ಅರ್ಜಿ ಕಮಿಶನರಿಗೆ ಕೊಡುವ ಉಸಾಬರಿ ಯಾಕೆ ಮಾಡುತ್ತಿದ್ದರು? ಆ ಸಮಯದಲ್ಲಿ ಸ್ಥಾನಿಕರು ಸುಬ್ರಮ್ಹಣ್ಯ ಮಠದ ಶಿಷ್ಯರಾಗಿಯೇ ಇರುತ್ತಿದ್ದರು. ಮತ್ತು ಹಾಗೆ ಹೇಳಿಕೊಳ್ಳುವುದರಲ್ಲಿ ಅಭಿಮಾನವೂ ಇತ್ತು. ಶ್ರೀಮಧ್ವಾಚಾರ್ಯರ ನಂತರ ಸುಬ್ರಮ್ಹಣ್ಯ ಮಠವು ಉಡುಪಿಯಲ್ಲಿ ಅಚ್ಯುತ ಪ್ರೇಕ್ಷಾಚಾರ್ಯರ ಮಠದಂತೇನೇ ಮಾಧ್ವ ವೈಷ್ಣವಸಂಪ್ರದಯದ್ದಾದರೂ ಅದಕ್ಕೆ ಮೊದಲು ಭಟ್ಟಾರಕ ಸಂಸ್ಥಾನವೆಂಬ ಭಾಗವತವೈಷ್ಣವ ಸಂಪ್ರದಾಯದ ಪೀಠವಾಗಿತ್ತು. ಸ್ಥಾನಿಕರು ಅಂದಿನಿಂದ ಸುಬ್ರಮ್ಹಣ್ಯ ಮಠದ ಶಿಷ್ಯರಾಗಿದ್ದವರು ಹಾಗೆಯೇ ಶ್ರೀವಿದ್ಯಾನಂದ ತೀರ್ಥರ ವರೆಗೆ ಆ ಮಠದ ಶಿಷ್ಯರಾಗಿರಲು ಸಾಧ್ಯವೂ ಇದೆ. ಆದುದರಿಂದ ಸ್ಥಾನಿಕರು ಸುಬ್ರಮ್ಹಣ್ಯ ಮಠದ ಶಿಷ್ಯರೇ ಆಗಿದ್ದರು. ಇದರಲ್ಲಿ ಇನ್ನು ಸಂಶಯ ಇರಲಾರದು. ಆದರೆ ಮುಂದೆ ವಿದ್ಯಾಪೂರ್ಣ ತೀರ್ಥರ ಕಾಲದಲ್ಲಿ ಶ್ರೀವಿದ್ಯಾನಂದ ತೀರ್ಥರ ಅರ್ಜಿ ಮುಂದೆ ಮಾಡಿ ತಾವು ಮುಖ್ಯ ಬ್ರಾಮ್ಹಣರೆಂದು ವಾದಿಸತೊಡಗಿದಾಗ ಮತ್ತು ಏಕಪಂಕ್ತಿಯಲ್ಲಿ ಸಹಭೋಜನ, ಅಡಿಗೆ ನೀರು ಮೊದಲಾದುವುಗಳಲ್ಲಿ ಬೆರೆತುಕೊಳ್ಳಲು ಅಪೇಕ್ಷಿಸಿದಾಗ ಶ್ರೀಗಳವರು ಇವರ ಅಧಿಕಪ್ರಸಂಗವನ್ನು ಒಪ್ಪದೆ ದೂರಮಾಡಿದರು. ತದನಂತರ ಕ್ರಮೇಣ ವೈಮನಸ್ಸು, ದ್ವೇಷಾಸೂಯೆ ಜಗಳಗಳು ಬೆಳೆದುಬಂದು ಕೊನೆಗೆ 1878ನೇ ಮಣಿವ್ಯಾಜ್ಯದಲ್ಲಿ ಪರ್ಯಾವಸಾನವಾಗಿ ಗುರುಶಿಷ್ಯಭಾವ ಕಡಿಯಿತುಃ. ಅಲ್ಲಿಂದ ಶೃಂಗೇರೀ ಮಠದ ಬೆನ್ನು ಹತ್ತುವುದು ಶುರುವಾಗಿ

1924ರಲ್ಲಿ ಲಂಚ ಅಲ್ಲ ಗುರುದಕ್ಷಿಣೆ ಎಂಬುದಾಗಿ ಕೇಳಿದಷ್ಟು ಹಣ ಕೊಟ್ಟು ರಾಯಸ ದೊರಕಿಸಿ ಶೃಂಗೇರೀ ಮಠದ ಶಿಷ್ಯರಾದ ಸಂಗತಿ ಇದೆ.

**ಜನರ ಅವಗಾಹನೆಗಾಗಿ ಶ್ರೀನಿವಾಸರಾಯರ ಕೆಲ ವಾಕ್ಯಗಳನ್ನು ಉದಾಹರಿಸಿ ವಿವರಿಸಬೇಕಾಗಿದೆ.**

1. (ಸ್ಥಾ. ಬ್ರಾ. ಪು. 18) "ಆದಿಯಲ್ಲಿ ಸ್ಥಾನಿಕ ಪಂಗಡದವರು ಇತರ ಜಿಲ್ಲೆಗಳಲ್ಲಿ ಇದ್ದವರಂತೆ. ಶೃಂಗೇರಿ ಮಠಕ್ಕೆ ಸೇರಿದವರಾಗಿರಬೇಕು.

2. ಶ್ರೀಮಧ್ವಾಚಾರ್ಯರ ಕಾಲದ ವರೆಗೂ ಸಂಪೂರ್ಣವಾಗಿ ಕನ್ನಡ ಜಿಲ್ಲೆಗಳು ಆಚಾರ ವಿಚಾರಗಳಲ್ಲಿ ಶೃಂಗೇರಿ ಮಠಕ್ಕೆ ಒಳಪಟ್ಟಿರಬೇಕು.

3. (ಪು. 19) ಮಧ್ವಮತಾನುಯಾಯಿಗಳ ಮತ್ತು ಅವರ ಬಂಧು ಭಾಗವತ ಸಂಪ್ರದಾಯದವರ ಪ್ರಾಬಲ್ಯ ಮತ್ತು ವಿರೋಧ ಭಾವನೆ ಹೆಚ್ಚಿದಂತೆ ಶೃಂಗೇರಿ ಮಠದವರು ತಮ್ಮ ಅಧಿಕಾರವನ್ನು ಈ ಜಿಲ್ಲೆಯಿಂದ ಹಿಂತೆಗೆದಿರಬೇಕು. ಅದಕ್ಕನುಸಾರವಾಗಿ ಸದರಿ ಮಠದ ಶಿಷ್ಯ ವರ್ಗದವರು ಶಿಷ್ಯ ಸ್ವಾಮಿಗಳೊಂದಿಗೆ ಹಿಮ್ಮೆಟ್ಟಿರಬೇಕು.

4. ಉದ್ಯೋಗದಲ್ಲಿದ್ದ ಸ್ಥಾನಿಕರು ಮಾತ್ರ ಇಲ್ಲಿಯೇ ಇರಬೇಕಾಯಿತು. ಇಲ್ಲಿಯ ಸಂಪರ್ಕವನ್ನು ಬಿಟ್ಟ ಮಠವನ್ನು ದೂರಮಾಡಬೇಕಾಯಿತು. ಇಲ್ಲಿಯ ಬ್ರಾಹ್ಮಣ ವರ್ಗದ ಹಿಂಸೆಗೆ ಗುರಿಯಾಗಬೇಕಾಯಿತು.

5. ಎಷ್ಟರ ಮಟ್ಟಿಗೆ ಗುರುಶಿಷ್ಯ ಸಂಪರ್ಕ ನಿಂತುಹೋಗಿತ್ತು ಎಂದರೆ ಗುರುಗಳಿಗೆ ಶಿಷ್ಯರ ಪರಿಚಯ, ಶಿಷ್ಯರಿಗೆ ಗುರುಗಳ ಪರಿಚಯ ನಿಂತು ಗುರುಶಿಷ್ಯಭಾವದ ಸಂಕಲೆಯ ಗೊಣಸು ತಪ್ಪಿ ಚೆಲ್ಲಾಪಿಲ್ಲಿಯಾಗಿತ್ತು.

6. ಆದುದರಿಂದಲೇ ತಿರುಗಿ ಶಿಷ್ಯರ ಗುರುತು ಹಚ್ಚುವುದಕ್ಕೆ 63—20/19-12-1921 ಮತ್ತು 136/31-8-1922ನೇ ಅಪ್ಪಣೆ ಪ್ರಕಾರ ವಿಚಾರಣಾ ಸಮಿತಿಯನ್ನು ಏರ್ಪಡಿಸಿ ತಾ. 8-1-1924ರಲ್ಲು ರಾಯಸ ಹೊರಡಿಸಬೇಕಾಯಿತು.

7. ಶಿಷ್ಯವರ್ಗದವರು ಗುರುಕಾಣಿಕೆಯನ್ನು ಹಲವು ವರ್ಷ ಸಲಾಯಿಸದಿದ್ದುದರಿಂದ ಏಕಗಂಟಿನಿಂದ ಅರ್ಪಿಸಬೇಕಾಗಿ ಬಂತು.

8. ಮೊದಲಿನಿಂದಲೂ ಸ್ಥಾನಿಕರು ಶೃಂಗೇರಿ ಮಠದ ಶಿಷ್ಯರಾಗಿದ್ದರು ಎಂಬುದಕ್ಕೆ ಮಠದವರು ಸ್ಥಾನಿಕರನ್ನು ದ್ರಾವಿಡಾಂತರ್ಗತ ಬ್ರಾಹ್ಮಣರೆಂದು ತೀರ್ಮಾನಿಸಿ ಪ್ರಸಿದ್ಧಿಸಿದ ರಾಯಸವೇ ಪ್ರಬಲ ದೃಷ್ಟಾಂತ.

9. (ಪು. 26) ಡಿಸ್ಟ್ರಿಕ್ಟ್ ಮ್ಯಾನುವೇಲಿನಲ್ಲಿ ಸ್ಥಾನಿಕ ಜಾತಿಯ ಹೆಸರನ್ನು ಲೋಪಮಾಡುವಂತೆ ಸಾಧಿಸಿದ್ದಾಗ್ಯೂ ಥರಸ್ಟನ್ ದೊರೆಗಳು ಅದನ್ನು ಕಂಡುಹಿಡಿದು ತಾನು ರಚಿಸಿದ ಪುಸ್ತಕದಲ್ಲಿ ತೋರಿಸಿರುವರು.

(ಪು. 21) ಸ್ಥಾನಿಕ ಶಬ್ದವು ಜಾತಿವಾಚಕವಾಗಿ ಸನ್ 1869ರಲ್ಲಿ ರೂಢಿಗೆ ಬಂದಿರಬೇಕು. ಅದನ್ನು ವಿರೋಧಿಸುವುದಕ್ಕೆ ಮಾಡಿದ ಪ್ರಯತ್ನವು ಜಿಲ್ಲಾ ಗಜೇಟಿನಲ್ಲಿಯೇ ಉಳಿಯಿತು.

10. ಸ್ಥಾನಿಕ ಶಬ್ದವು ಜಾತಿವಾಚಕವಾಗಿ ಹೋದದ್ದನ್ನು ತಿಳಿದು ಸ್ಥಾನಿಕ ಸಂಗಡದವರು ಸ್ಥಾನಿಕ ಬ್ರಾಹ್ಮಣರೆಂಬುದಾಗಿ 1872ರಲ್ಲಿ ಹೇಳಿಕೊಳ್ಳಲಾರಂಭಿಸಿದರು.

ಇದರ ಪೈಕಿ 1, 2, 3 ಉತಾರೆಗಳು ಊಹಾ ಪ್ರಪಂಚವೇ? ತಮ್ಮ ಅಪೇಕ್ಷೆ ವ್ಯಕ್ತಪಡಿಸಿದ್ದಾರಲ್ಲದೆ ಇತ್ಥಂಭೂತ ವಿಷಯವಲ್ಲ. ದಕ್ಷಿಣ ಕನ್ನಡ ಜಿಲ್ಲೆಯು ಶೃಂಗೇರಿ ಮಠದ ಅಧಿಕಾರಕ್ಕೆ ಒಳಪಟ್ಟಿತ್ತು. ಸ್ಥಾನಿಕ ಸಂಗಡದವರು ಆದಿಯಿಂದಲೂ ಶೃಂಗೇರಿ ಮಠದ ಶಿಷ್ಯರಿದ್ದರು ಎಂದು ದೃಢವಾಗಿ ಹೇಳುವ ಎದೆಗಾರಿಕೆ ಆ ಮಾತಿನಲ್ಲಿ ಕಾಣುವುದಿಲ್ಲ. ಹಾಗೆ ಇದ್ದದ್ದೂ ಇಲ್ಲ. ಶಿವಳ್ಳಿಯವರನ್ನು ಬಿಡಿ. ಅವರು ಮಾಧ್ವರು. ಮೊದಲು ಭಾಗವತ ಸಂಪ್ರದಾಯದವರು. ಅವರು ಶೃಂಗೇರಿ ಮಠದ ಶಿಷ್ಯರಾಗೋಣ ಬೇಡ. ಶೈವರು ವ ಸ್ಮಾರ್ತರಾದ ಕೋಟದವರು ಏಕೆ ಶೃಂಗೇರಿ ಮಠದ ಶಿಷ್ಯರಲ್ಲ? ತಮ್ಮ ಧರ್ಮನಿರ್ಣಯಕ್ಕೆ ಕೋಟಮಹಾಜಗತ್ತನ್ನು ಗುರುಸ್ಥಾನದಲ್ಲಿ ಒಪ್ಪಿಕೊಂಡಿರುತ್ತಾರೆ. ಹವೀಕರು ರಾಮಚಂದ್ರಪುರ ಮಠವನ್ನಾಗಿಟ್ಟುಕೊಂಡದ್ದು ರಾಯರ ಪುಸ್ತಕದ 16ನೇ ಪೇಜಿನಲ್ಲಿ ಕಾಣುತ್ತದೆ. ಸ್ಥಾನಿಕರು ಸುಬ್ರಹ್ಮಣ್ಯ ಮಠದ ಶಿಷ್ಯರು ಶ್ರೀವಿದ್ಯಾನಂದತೀರ್ಥರ ಶಿಷ್ಯರಾಗಿದ್ದರು. ಅಂದಮೇಲೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೃಂಗೇರಿ ಮಠದ ಶಿಷ್ಯರು ಯಾರು ಇರುತ್ತಿದ್ದರು?

ವಸ್ತುಸ್ಥಿತಿಯೆಂದರೆ ಪಶ್ಚಿಮ ಕರಾವಳಿ ಪ್ರದೇಶವು ಶ್ರೀಹಸ್ತಾಮಲಕರ ಅಂದರೆ ದ್ವಾರಕಾ ಮಠದ ಜ್ಯೂರಿ ಸೆಕ್ಷನಿನಲ್ಲಿರುತ್ತದೆ. ಶೃಂಗೇರಿ ಮಠದ ಅಧಿಕಾರಕ್ಕೊಳಪಟ್ಟದ್ದಲ್ಲ. ಆದ್ದರಿಂದ ಶೃಂಗೇರಿ ಮಠದ ಅಧಿಕಾರ ದಕ್ಷಿಣ ಕನ್ನಡ ಜಿಲ್ಲೆಗೆ ಬರಲೂ ಇಲ್ಲ. ಹಿಮ್ಮೆಟ್ಟಲೂ ಇಲ್ಲ. ಪಸರಿಸಲೂ ಇಲ್ಲ. ಎಳೆದುಕೊಳ್ಳಲೂ ಇಲ್ಲ. ಇದೀಗ ಹೊಸ ಶಿಷ್ಯರು (ಸ್ಥಾನಿಕರು) ಅತ್ತು ಕರೆದು ಬರಮಾಡಿಕೊಂಡಮೇಲೆ 20ನೇ ಶತಮಾನದಲ್ಲಿ ಪಸರಿಸಲು ಆರಂಭಿಸಿದರಷ್ಟೇ? ಎಂಬುದು ಉಪಪನ್ನವಾದೀತು.

ತುಳುನಾಡು ಪುಸ್ತಕ ಪುಟ 141ರಲ್ಲಿ ಆನಂದಗಿರಿಕೃತ ಶಂಕರ ವಿಜಯದ ವಾಕ್ಯ ಉದಾಹರಿಸಿ ಶ್ರೀಹಸ್ತಾಮಲಕರೆಂಬ ಆದ್ಯ ಶಂಕರಾಚಾರ್ಯರ ಮುಖ್ಯ 4 ಶಿಷ್ಯರ ಪೈಕಿ ಒಬ್ಬರು ಪಶ್ಚಿಮ ಕರಾವಳಿ ಪ್ರದೇಶದಲ್ಲಿ ದಿಗ್ವಿಜಯ ಮಾಡುತ್ತಾ ಅಲ್ಲಿಯ ಜನರಿಗೆ ವೈಷ್ಣವ ಮಂತ್ರ ಉಪದೇಶ, ಪಂಚಮುದ್ರಾಧಾರಣ, ಊರ್ಧ್ವಪುಂಢ್ರಧಾರಣ ಮೊದಲಾದ ಪಂಚರಾತ್ರೋಕ್ತ ದೀಕ್ಷಾಕೊಟ್ಟು ತಮ್ಮ ಶಿಷ್ಯರನ್ನು ಮಾಡಿ ಉಡುಪಿ ಮೊದಲಾದ ಕ್ಷೇತ್ರಗಳಲ್ಲಿ ಶ್ರೀಕೃಷ್ಣಾದಿ ಪ್ರತಿಮೆಗಳನ್ನು ಪ್ರತಿಷ್ಠಿಸಿ ತನ್ನ ಅಧಿಕಾರಕ್ಷೇತ್ರವನ್ನಾಗಿಸಿದ ಸಮಾಚಾರ ತಿಳಿಸಿರುತ್ತಾರೆ. ಶ್ರೀ ಅಚ್ಚುತ ಶರ್ಮರ ಪುಸ್ತಕದಲ್ಲಿ ಸಹ ಶಂಕರ ವಿಜಯದ ವಾಕ್ಯ ಉದಾಹರಿಸಿ ಅನೇಕಾವೃತ್ತಿ ಶ್ರೀಹಸ್ತಾಮಲಕರ ಶ್ರೀವೇಣುಗೋಪಾಲಕೃಷ್ಣನ ಕುರಿತು ಚರ್ವಿತ ಚರ್ವಣ ನಡೆದದ್ದು ಕಾಣುತ್ತದೆ. ಆದುದರಿಂದ

ಇವರಿಬ್ಬರಿಗೂ ಆ ವಿಷಯ ಒಪ್ಪಿತವೆಂದು ಸಿದ್ಧವಾಗುತ್ತದೆ. ಸದರಿ ಶ್ರೀಹಸ್ತಾಮಲಕ
ತಂದೆಯು ಪ್ರಭಾಕರ ಅಗ್ನಿಹೋತ್ರಿಗಳೆಂದೂ ಉಡುಪಿ ನಿವಾಸಿಗಳೆಂದೂ ಶಂಕರ
ವಿಜಯದಿಂದಲೇ ಸಿದ್ಧವಾಗಿದೆ. ಶ್ರೀಹಸ್ತಾಮಲಕರಿಗೆ ಇರುವ ವೈಷ್ಣವ ದೀಕ್ಷಾ,
ಅದ್ವೈತದ ಅನಾಸ್ಥಾ, ಇದರ ಮೇಲಿಂದ ಅವರು ಪರಂಪರೆಯಾಗಿಯೇ ಭೇದ
ವಾದಿಗಳೆಂದೂ ವೈಷ್ಣವರೆಂದೂ ಸಿದ್ಧವಾಗುತ್ತದೆ. ಶೀವಳ್ಳಿಯವರು ಹೇಳಲು ಅಡ್ಡಿ
ಯಿಲ್ಲ.

ಶ್ರೀಹಸ್ತಾಮಲಕರು ಹುಟ್ಟಿ ಬೆಳೆದ ದೇಶ, ದಿಗ್ವಿಜಯ ಮಾಡಿದ ಪ್ರದೇಶ, ತನ್ನ
ಶಿಷ್ಯವರ್ಗದವರ ಸನ್ನಿವೇಶ, ತನ್ನ ದಿಗ್ವಿಜಯದ ಗುರುತೆಂದು ಉಡುಪಿಯಲ್ಲಿ ಶ್ರೀಕೃಷ್ಣ
ಪ್ರತಿಷ್ಠೆ ಮಾಡಿರುತ್ತಾರೆ. ಸುಬ್ರಹ್ಮಣ್ಯದಲ್ಲಿ (ಶ್ರೀನರಸಿಂಹ) ದೇವರ ಪ್ರತಿಷ್ಠೆ ಮಾಡಿ
ದ್ದಾರೆ. ಈ ಎಲ್ಲಾ ಕಾರಣಗಳಿಂದ ದಕ್ಷಿಣ ಕನ್ನಡ ಜಿಲ್ಲೆಯು ಶ್ರೀಹಸ್ತಾಮಲಕರ
ಪರಂಪರೆಯ ದ್ವಾರಕಾಮಠದ ಅಧಿಕಾರಕ್ಕೆ ಸೇರಿದ್ದಾಗಿದೆ. ಶ್ರೀಮಧ್ವಾಚಾರ್ಯರ
ನಂತರ ಅವರ ಪ್ರಭಾವದಿಂದ ಸದರಿ ಮಠದವರು ಹಿಂದೆ ಸರಿದರು ಎಂಬುದು ಸೂಕ್ತ
ವಾಗುತ್ತದೆ. ಶ್ರೀನಿವಾಸರಾಯರು ಬಾಲಹೋದ ನರಿಯಂತೆ ತಾವು ಶೃಂಗೇರಿ ಮಠದ
ಶಿಷ್ಯರಾಗಬೇಕೆಂದ ಮೇಲೆ ಕನ್ನಡ ಜಿಲ್ಲೆಯವರೆಲ್ಲರೂ ಹಾಗಾಗಬೇಕೆಂದು ಬಯಸು
ತ್ತಾರೆ. ಅದಕ್ಕೆ ತಕ್ಕ ಕಥೆಯನ್ನು ಕಲ್ಪಿಸಿದ್ದಾರೆ.

4ನೇ ಉತಾರೆಯ ಅರ್ಥವೇ ಆಗುವುದಿಲ್ಲ. ಇವರ ಉದ್ಯೋಗವೆಂದರೆ ದೇವ
ಕಾರೀ ಕೆಲಸ. ಇದಕ್ಕಾಗಿ ಶೃಂಗೇರಿ ಮಠದ ಸಂಪರ್ಕ ಏಕೆ ಬಿಡಬೇಕಾಯಿತು? ಏ
ದೂರ ಮಾಡಬೇಕಾಯಿತು? ಇಷ್ಟು ಸುಲಭವಾಗಿ ಶ್ರೀಗುರುಮಠವನ್ನು ದೂರ ಮಾಡು
ವವರ ಗುರುಭಕ್ತಿಯಾದರೂ ಎಂಥಾದ್ದು? ಒಂದು ವೇಳೆ ಜಿಲ್ಲಾಧಿಕಾರ, ಧರ್ಮಾಧಿ
ಕಾರ, ಇದ್ದದ್ದೇ ಆದರೆ ಅಧಿಕಾರಿಗಳಾದ ತಾವು ಏಕೆ ಇತರ ಹಿಂಸೆಗೆ ಗುರಿಯಾಗಬೇಕು?
ಕ್ರಿಸ್ತರು, ಮುಸಲ್ಮಾನರು, ಅಧಿಕಾರಿಗಳಾಗಿ ಬಂದವರು ತಮ್ಮ ಗುರುಸಂಪ್ರದಾಯ
ಗಳನ್ನು ಇತರರ ಹಿಂಸೆಗಾಗಿ ಬಿಟ್ಟರೆ? 6 ಸಾವಿರ ಮೈಲು ದೂರದಿಂದ ಕ್ರಿಸ್ತ ಅಧಿಕಾರಿ
ಗಳು ಇಲ್ಲಿಯವರನೇಕರನ್ನು ತಮ್ಮ ಗುರುಸಂಪ್ರದಾಯದೊಳಗೆ ತೆಗೆದುಕೊಂಡರೆ
ವಿನಹ ತಾವು ಮಾತ್ರ ತಮ್ಮ ಗುರುಸಂಪ್ರದಾಯ ಬಿಟ್ಟಿಲ್ಲ. ಮತ್ತೊಬ್ಬರ ಗುರು
ಸಂಪ್ರದಾಯ ಹಿಡಿದಿಲ್ಲ. ಒಂದು ವೇಳೆ ಇವರು ಅಧಿಕಾರಿಗಳಾಗಿ ಇರಲೇ ಇಲ್ಲವೆಂದು
ಅಂದುಕೊಳ್ಳೋಣ. ದೇವಕಾರಿಗಳಾಗಿಯೇ ಇರಲಿ. ಆದರೂ ಇತರರು ಏಕೆ ಹಿಂಸಾ
ಮಾಡುತ್ತಾರೆ? ಶೀವಳ್ಳಿಯವರಲ್ಲಿಯೇ ಮಾಧ್ವರಾಗದವರು ಎಷ್ಟು ಜನರಿರುವುದಿಲ್ಲ.
ಕೋಟ, ಹವೀಕರಂತೆ ಇವರಿಗೂ ಸ್ಮಾರ್ತರಾಗಿ ಇರಬಹುದಿತ್ತಲ್ಲವೇ? ಇರಲಿಲ್ಲವೇ?
ಶೃಂಗೇರಿ ಮಠ ದಕ್ಷಿಣ ಕನ್ನಡ ಜಿಲ್ಲೆಗೆ ಸಮೀಪವಿದೆ. ಅಲ್ಲಿಗೆ ಹೋಗುತ್ತೇವೆ, ಅವ
ರಂತೆ ಇರುತ್ತೇವೆಯೆಂದರೆ ಆಗ ಇವರನ್ನು ಯಾರು ಕಟ್ಟಿಹಾಕಿದರು? ಮತ್ತೀಗ ಯಾರು
ಕಟ್ಟು ಬಿಚ್ಚಿ ಹೊರ ಬಿಟ್ಟರು? ಆದುದರಿಂದ 4ನೇ ಉತಾರೆಯ ಮಾತು ವೃಥಾ
ಪ್ರಲಾಪ ಮಾತ್ರ.

6ನೇಯ ಉತಾರೆಯಲ್ಲಿ ಗುರುಶಿಷ್ಯಭಾವದ ಸಂಕಲೆಯ ಗೊಣಸು ತಪ್ಪಿದೆ ಎನ್ನುತ್ತಾರೆ. ಇದು ಆಶ್ಚರ್ಯಕರ ಮಾತು. ಸನ್ 1869ರ ವರೆಗೆ ತಾವು ಶ್ರೀ ಸುಬ್ರಹ್ಮಣ್ಯ ಮಠದ ಶಿಷ್ಯರಾಗಿದ್ದೆವು ಎಂದು ತಮ್ಮ ಪುಸ್ತಕದ 17ನೇ ಪೇಜಿನಲ್ಲಿ ಬರೆದು ಒಪ್ಪಿ ಈಗ ಸ್ಥಾನಿಕರು ಮೊದಲಿನಿಂದಲೂ ಶೃಂಗೇರಿ ಮಠದ ಶಿಷ್ಯರಾಗಿದ್ದರು. ಆದರೆ ಗುರುಶಿಷ್ಯಭಾವದ ಸಂಕಲೆಯ ಗೊಣಸು ತಪ್ಪಿದೆ ಎಂದರೆ ಮೊದಳಿನ ಗೊಣಸು ತಪ್ಪಿದೆ ಎಂದೇ ಹೇಳಬೇಕಾಗುತ್ತದೆ. "ಸ್ಥಾನಿಕ ಶಬ್ದವು ಜಾತಿ ವಾಚಕನಾಗಿ ಹೋದ ದ್ದನ್ನು ತಿಳಿದು ಸ್ಥಾನಿಕ ಪಂಗಡದವರು ಸ್ಥಾನಿಕ ಬ್ರಾಹ್ಮಣರೆಂದು ಸನ್ 1872ರಲ್ಲಿ ಹೇಳಿಕೊಳ್ಳಲಾರಂಭಿಸಿದರು" ಎಂದು 10ನೇ ಉತಾರೆಯ ಪ್ರಕಾರ ಒಪ್ಪುತ್ತಾರೆ. 9ನೇ ಉತಾರೆಯಲ್ಲಿ "ಸ್ಥಾನಿಕ ಶಬ್ದವು ಜಾತಿ ವಾಚಕನಾಗಿ 1869ರಲ್ಲಿ ರೂಢಿಗೆ ಬಂದಿರಬೇಕು. ಅದನ್ನು ವಿರೋಧಿಸುವ ಪ್ರಯತ್ನ ಜಿಲ್ಲಾ ಗಜೇಟಿನಲ್ಲಿಯೇ ಉಳಿ ಯಿತು. ಡಿಸ್ಟ್ರಿಕ್ಟ್ ಮ್ಯಾನುವೇಲಿನಲ್ಲಿ ಸ್ಥಾನಿಕ ಜಾತಿಯ ಹೆಸರನ್ನು ಲೋಪ ಮಾಡು ವಂತೆ ಸಾಧಿಸಿದ್ದಾಗ್ಯೂ ಸ್ಟುರಕ್ ದೊರೆಯು ತನ್ನ ಪುಸ್ತಕದಲ್ಲಿ ತೋರಿಸಿರುವನು." ಹೀಗೆಲ್ಲಾ ಬರೆದಿರುವುದನ್ನು ಕಾಣುತ್ತೇವೆ. ಅಂದಮೇಲೆ ಶೃಂಗೇರಿ ಮಠದ ಬ್ರಾಹ್ಮಣ ಶಿಷ್ಯರಾಗಿರಲು ಮೊದಲಿನಿಂದಲೂ ಹೇಗೆ ಸಾಧ್ಯ? ದ್ರಾವಿಡ ಬ್ರಾಹ್ಮಣಾಂತರ್ಗತ ಬ್ರಾಹ್ಮಣರೆಂದೇ ತೀರ್ಮಾನಿಸಿ ಪ್ರಸಿದ್ಧಿಸಿದ ರಾಯಸವೆಂದು 8ನೇ ಉತಾರೆಯಲ್ಲಿ ಬರೆದದ್ದನ್ನು ಹೇಗೆ ನಾವು ಒಪ್ಪಬೇಕು? ಒಟ್ಟಾರೆ ಶಿಷ್ಯರಾಗಲು ಹವಣಿಸಿ 7ನೇ ಉತಾರೆಯಲ್ಲಿ ಬರೆದಿರುವಂತೆ ಸ್ಥಾನಿಕರು ಮಾಡಿದ್ದರಿಂದ ಗುರುಮಠದವರು 6 ಮತ್ತು 8ನೇ ಉತಾರೆಯಂತೆ ನಡೆದುಕೊಂಡರು. ಇದಿಷ್ಟೇ ಸಾರಾಂಶ. ರಾಯಸದ ಸ್ವರೂ ಪವೂ ವಿವರಿಸಿಯದೆ.

ಕೆಲವೊಂದು ಜಡ್ಜ್‌ಮೆಂಟುಗಳಲ್ಲಿ "ಸ್ಥಾನಿಕ ಹೆಬ್ಬಾರ" ಹೀಗೆ ಸ್ಥಾನಿಕರನ್ನು ಹೆಬ್ಬಾರ ಎಂಬುದಾಗಿ ನಿರ್ದೇಶಿಸುವುದರಿಂದ ಹೆಬ್ಬಾರನೆಂದರೆ ಸ್ಥಾನಿಕರೆಂದು ತೀರ್ಮಾನಿಸಿ ಹೆಬ್ =ದೊಡ್ಡ ಹಾರ=ಹಾರ್ವ, ಬ್ರಾಹ್ಮಣಶ್ರೇಷ್ಠ ಎಂದು ಸಿದ್ಧಮಾಡಲು ಪ್ರಯತ್ನಿಸಿದ್ದಾರೆ ರಾಯರು. ಅವರ ಪದ್ಧತಿ ತಪ್ಪೋ ಒಪ್ಪೋ ಎಂಬುದು ಬೇರೆ ವಿಚಾರ. ಮೊದಲು ತಾವು ಬ್ರಾಹ್ಮಣರೆಂದು ಏಕೆ ಸಿದ್ಧಮಾಡಲು ಪ್ರಯತ್ನಿಸಬೇಕು? ಬ್ರಾಹ್ಮಣರೇ ಇದ್ದರೆ ರೂಢಿಯ ಮೇಲಿಂದಲೇ ಬ್ರಾಹ್ಮಣರೆಂದು ಸಿದ್ಧವಾಗುತ್ತಿಲ್ಲವೇ? ಬೇರೆ ದೇಶಕ್ಕೆ ಹೋದರೆ ಅಪರಿಚಿತ ಸ್ಥಳದಲ್ಲಿ ಅಲ್ಲಿಯವರಿಗೆ ಸಂಶಯ ಬರುವುದೂ, ಅದರ ನಿರಾಕರಣೆಗೆಂದು ಸಮರ್ಥಿಸುವುದೂ ಉಚಿತ. ಆದರೆ ಹುಟ್ಟಿದೂರಲ್ಲಿ ತಮ್ಮ ಕುಲಗೋತ್ರಗಳು ಎಲ್ಲರಿಗೂ ಪರಿಚಿತವಿರುವುದರಿಂದ ಬ್ರಾಹ್ಮಣ್ಯದ ಸಮರ್ಥನೆ ವ್ಯರ್ಥವೇ ಸರಿ. ಮಾತ್ರವಲ್ಲ, ಇದ ರಲ್ಲಿ ಏನೋ ಗುಟ್ಟು ಉಂಟು ಎಂದು ಸಂಶಯವೂ ಕೂಡಾ ಹುಟ್ಟುತ್ತದೆ. ಶಿವಳ್ಳಿ ಯವರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ತಾವು ಬ್ರಾಹ್ಮಣರೆಂದು ಸಮರ್ಥಿಸಬೇಕಾ ಗಿಲ್ಲ. ಹಾಗೆಯೇ ಕೋಟದವರು, ಹವೀಕರು, ಸೈ. ಏಕೆಂದರೆ, ವಿವಾದವಿರುವುದಿಲ್ಲ. ಆದುದರಿಂದ ಶ್ರೀನಿವಾಸ ರಾಯರೇ ಆಗಲಿ, ಗುರುರಾಜ ಭಟ್ಟರೇ ಆಗಲಿ,

ಇಂಥಾ ಅವಾಸ್ತವ ಬಹುಬಹು ಸಮರ್ಥನೆ ಮಾಡುವುದರಿಂದ ಸಂಶಯಕ್ಕೆ ಹೆಚ್ಚೆಚ್ಚು ಎಡೆಕೊಟ್ಟಂತಾಗುತ್ತದೆಯೇ ಹೊರತು ತಮ್ಮ ಧ್ಯೇಯ ಸಿದ್ಧವಾದೀತೆಂದು ಅನಿಸುವುದಿಲ್ಲ. ಹೆಬ್ಬಾರ, ಹೆಗ್ಗಡೆ ಈ ಶಬ್ದಗಳು ಒಂದು ವಿಶಿಷ್ಟಾರ್ಥ ಉಳ್ಳದ್ದಾಗಿ ಅವುಗಳಿಗೆ ತಮಗೆ ಬೇಕಾದಂತೆ ಅರ್ಥ ಪರಿವರ್ತನೆ ಮಾಡಲು ಬರುವಂತಿಲ್ಲ. "ಪೆರಿಯ" ದೊಡ್ಡ ಎಂಬ ತಮಿಳು ಪದವು ಕನ್ನಡದಲ್ಲಿ ಹೆರಿಯ ಎಂಬುದಾಗಿ ಬದಲಾಯಿಸಿದೆ. ಅದರಂತೆ "ಪಾರ್ಪಾನ್"=ಬ್ರಾಹ್ಮಣ ಎಂಬ ತಮಿಳು ಪದವು ಹಾರ್ವನು ಎಂದೂ ಬದಲಾಯಿಸಿದೆ. ಅವೆರಡು ಶಬ್ದಗಳ ವಿಕೃತ ಸಂಯುಕ್ತ ಶಬ್ದವೇ "ಹೆಬ್ಬಾರ" ಎಂದು ನಿರ್ಧರಿಸುವುದು ಹೇಗೆ ಸಾಧ್ಯ? ದೇವಸ್ಥಾನದ ಹೆಬ್ಬಾರಿಕ ಕೆಲಸವು ಶ್ರೇಷ್ಠಬ್ರಾಹ್ಮಣ ನಿಗೆ ಯುಕ್ತವಾದುದಲ್ಲವೆಂದು ಮಂಗಳೂರು ಕೋರ್ಟು ನಂಬ್ರ 43/1644ನೇ ವ್ಯಾಜ್ಯದಲ್ಲಿ ಆದ ತೀರ್ಪಿನಿಂದ ವಿದಿತವಾಗುತ್ತದೆ. ಅದರಲ್ಲಿ ಹೇಳಿರುವುದೇನೆಂದರೆ, "ಸುಬ್ರಹ್ಮಣ್ಯ ದೇವಸ್ಥಾನದಲ್ಲಿ ಜಾತ್ರೆ ಮುಂತಾದ ಸಮಯಗಳಲ್ಲಿ ದೀವಟಿಗೆ—ವಿಶೇಷ ಸಮಯಗಳಲ್ಲಿ ಬೆಳ್ಳಿ ದೀವಟಿಗೆ—ಸಾಮಾನ್ಯ ಸಮಯಗಳಲ್ಲಿ ಹಿತ್ತಾಳಿ ದೀವಟಿಗೆ—ಇತರ ಸಾಧಾರಣ ನಿತ್ಯಕಟ್ಲೆ ಸಮಯದಲ್ಲಿ ಕೈದೀಪ ಸಹಾ 1ರಿಂದ 4ರ ವರೆಗಿನ ಪ್ರತಿವಾದಿರ ಪೈಕಿ ಆ ದೇವಸ್ಥಾನದಲ್ಲಿ ನಡೆಯುವ ನಿಬಂಧನೆ ಪ್ರಕಾರ ಸರ್ತಿಯವನೆಂಬ ಹೆಬ್ಬಾರಿಕೆಯವನು, ತೆಗೆದುಕೊಂಡು ಬರುವುದು ಕೂಡಾ ಕಟ್ಟಿಗೆಯವ ಬಂದು ವಾದಿರ ಸಂಗಡ ಹೇಳಿಕೊಂಡು ಮಠದಿಂದ ದೇವಸ್ಥಾನಕ್ಕೆ ಹೋದ ತರುವಾಯ ದೇವರ ಹತ್ತಿರ ನಡೆಯುವ ಮರ್ಯಾದೆಗಳು ನಡೆಸುವುದಾಗಿಯೂ ವಾದಿರಾಗಲಿ ಅವರ ಶಿಷ್ಯ ಎಂದರೆ ಚಿಕ್ಕ ಸ್ವಾಮಿಗಳು ಆಗಲಿ ಹಾಜರು ಇಲ್ಲದೆ ದೇವರ ಉತ್ಸವ ಮುಂತಾದ್ದು ನಡೆಸುವ ಪದ್ಧತಿ ಇಲ್ಲವೆಂದೂ ದೇವಸ್ಥಾನದಲ್ಲಿ ವೃಂದಾವನ ಪೂಜೆ ವಾದಿರು ಮಾಡುವ ಕಾಲದಲ್ಲಿ 1ರಿಂದ 4ರ ವರೆಗಿನ ಪ್ರತಿವಾದಿಗಳಲ್ಲಿ ಆಯಾಯ ಕಾಲದಲ್ಲಿ ಸರ್ತಿಯವರು ನೈವೇದ್ಯ ಸಮರ್ಪಣೆಗೋಸ್ಕರ ಅವಲಕ್ಕಿ ವಗೈರೆ ತಂದು ಇಡುವುದು, 2 ಕಾಲುದೀಪ ಇಡುವುದು ದೇವರ ಉತ್ಸವ ನಡೆಯುವ ಸಮಯದಲ್ಲಿ ರಥೋತ್ಸವ ಕಾಲದಲ್ಲಿ ಸಹಾ ವಾದಿರು ತೆಂಗಿನಕಾಯಿ ಒಡೆದ ತರುವಾಯ ಬಾಕಿ ಜನರು ಒಡೆಯಬೇಕಾಗಿ ಸಹ ಇಂಥ ಮರ್ಯಾದೆಗಳು" ಹೀಗೆಲ್ಲಾ ಬರೆದಿದೆ. ಇದರಿಂದ ದೇವಸ್ಥಾನದಲ್ಲಿ ದೀವಟಿಗೆ ಹಿಡಿಯುವುದು, ಆಮಂತ್ರಣ ಕೊಡುವುದು, ಕರಕೊಂಡು ಬರುವುದು, ಕಟ್ಟಿಗೆ ಕೋಲು ಹಿಡಿಯುವುದು ಇದೆಲ್ಲಾ ಪರಿಚಾರಿಕೆ ಕೆಲಸ ಶ್ರೇಷ್ಠಬ್ರಾಹ್ಮಣರ ಕೆಲಸವಲ್ಲ. ಈ ದಾವೆಯಲ್ಲಿ ವಾದಿ–ಸುಬ್ರಹ್ಮಣ್ಯ ಮಠದ ವಿದ್ಯಾರಾಜ ತೀರ್ಥರು.

ಪ್ರತಿವಾದಿರು—1. ಸ್ಥಾನಿಕ ಹೆಬ್ಬಾರ ನಾರಾಯಣಪ್ಪ
2. ಸ್ಥಾನಿಕ ಹೆಬ್ಬಾರ ನಾರಾಯಣ
3. ಸ್ಥಾನಿಕ ಹೆಬ್ಬಾರ ಕೃಷ್ಣ
4. ಸ್ಥಾನಿಕ ಹೆಬ್ಬಾರ ಗುಂಡ
5. ಸ್ಥಾನಿಕ ಪಾಟಾಳಿ ರಾಮಪ್ಪ

ಈ ದಾವೆಯಲ್ಲಿ ವಾದಿರಿಗೆ ರೂ. 150/- ಮಾನನಷ್ಟವನ್ನೂ ಯಾವತ್ತೂ ಕೋರ್ಟು ಖರ್ಚು ಸಹ ಕೊಡಬೇಕೆಂತಲೂ ತೀರ್ಮಾನವಾಗಿದೆಯಲ್ಲದೆ ಇನ್ನು ಮುಂದೆ ಪ್ರತಿ ವಾದಿರು ವಾದಿರಿಗೆ ಮಾಡುವ ಯಾವತ್ತೂ ಮರ್ಯಾದೆಗಳನ್ನು ಲೋಪಮಾಡದೆ ಹಿಂದಿನಂತೆ ಮಾಡಿಕೊಂಡು ಬರಬೇಕೆಂತಲೂ ತೀರ್ಪು ಆಗಿದೆ. ಇನ್ನೂ ಅನೇಕ ಶ್ರೀನಿವಾಸರಾಯರ ಅರ್ಥವಿಲ್ಲದ ಪ್ರಲಾಪಗಳು ನಿಸ್ಸಾರವೆಂದು ತಿಳಿದು ಉದಾಸೀನ ಮಾಡಲಾಗಿದೆ.

## ಉಪಸಂಹಾರ

ಅಂತೂ ಈ ದೇವಕಾರಿ ಸ್ಥಾನಿಕರು ಮೊದಲಿನಿಂದಲೂ ಶೃಂಗೇರಿ ಮಠದ ಶಿಷ್ಯ ರೆಂಬುದು ನಿಜವಾಗಲಾರದು. ಶಿವಬ್ರಾಹ್ಮಣರೆಂಬುದೂ ಸರಿಯಲ್ಲ. ಸ್ಥಾನಿಕ ಬ್ರಾಹ್ಮಣರೆಂಬುದೂ ನಿಜವಲ್ಲ. ಸನ್ 1869ರ ನಂತರದ ಚಟುವಟಿಕೆಗಳು ಮಾತ್ರ ವೆಂಬುದು ಶ್ರೀನಿವಾಸರಾಯ ಮೊದಲಾದವರ ಗ್ರಂಥಗಳ ಮೇಲಿಂದಲೇ ಸಿದ್ಧವಾಗಿದೆ. ಸ್ಥಾನಿಕ ಶಬ್ದವು—ಅಧಿಕಾರಿ ಸ್ಥಾನಿಕ—ಉದ್ಯೋಗದ ಮೇಲಿಂದ, ಜಾತಿ ಸ್ಥಾನಿಕ—ಜನ್ಮದ ಮೇಲಿಂದ, ಹೀಗೆ 2 ಅರ್ಥವುಳ್ಳದ್ದು ಇದೆ. ಅದರ ಪೈಕಿ ಇವರು ಸ್ಥಾನೆ=ಅರಸ್ಥಾನದಲ್ಲಿ ನಿಯುಕ್ತರಾಗಿ ಎಂದೂ ಇರಲಿಲ್ಲ. ಮತ್ತು ಸ್ಥಾನೆ=ಸಂಸ್ಥಾನ=ಧರ್ಮಪೀಠಗಳಲ್ಲಿ (ಪೂರ್ವದ ಧರ್ಮಪೀಠವೆಂದರೆ ದೇವಸ್ಥಾನಗಳೇ) ನಿಯುಕ್ತರಾಗಲು ಅರ್ಹರೂ ಅಲ್ಲ. ಹಾಗೆ ಇರಲೂ ಇಲ್ಲ. ಮತ್ತು ಸ್ಥಾನೆ=ದೇವಸ್ಥಾನೆ=ವಸತಿ=ಅಂಬಲವಾಸಿ=ದೇವಕಾರಿ ಎಂಬ ಅರ್ಥದಲ್ಲಿ ಸ್ಥಾನಿಕರು ಮೊದಲಿನಿಂದಲೂ ಇರುತ್ತಿದ್ದರು. ಇದು ಶಾಸ್ತ್ರಸಮ್ಮತ, ಸಂಪ್ರದಾಯ ಸಿದ್ಧ. ಡಿಸ್ಟ್ರಿಕ್ ಮ್ಯಾನ್ಯುವೇಲಿನಲ್ಲಿ ಬರೆದಿದೆ. ಅಪೀಲು S. No. 248/1881ನೇ ದಾವೆಯಲ್ಲಿ ಕೆಳಕೋರ್ಟಿನ ತೀರ್ಪನ್ನು ಕಾಯಂ ಮಾಡುತ್ತಾ "ಸ್ಥಾನಿಕರು ಬ್ರಾಹ್ಮಣರಲ್ಲ. ಅದು ಹೊಸ ಬೇರೆ ಜಾತಿಯೆಂದು" ಬರೆಯಲಾಗಿದೆ. ಸಹ್ಯಾದ್ರಿ ಖಂಡದಲ್ಲಿ ಬರೆದಂತೆ ಇವತ್ತಿನ ವರೆಗೆ ಸಕಲ ದೇವಸ್ಥಾನಗಳಲ್ಲಿ ನಡೆದುಕೊಂಡು ಬಂದಿರುತ್ತದೆ. ಈ ಪದ್ಧತಿಯನ್ನು ಸರಿಯಲ್ಲ, ಬದಲಾಯಿಸಬೇಕೆಂದು ಪ್ರತಿವಾದಿರು ತಮ್ಮ ಪುಸ್ತಕದಲ್ಲಿ ಎಷ್ಟೇ ಬರೆದರೂ ಅವುಗಳು ಪೂರ್ವಪದ್ಧತಿಯನ್ನು ಬಿಡಿಸಲು ಸಾಕಷ್ಟು ಸಮರ್ಥ ಆಧಾರಗಳು ಆಗುವುದಿಲ್ಲ.

"ತುಳುನಾಡಿನ ಇತರ ಬ್ರಾಹ್ಮಣರು" ಎಂಬ ಶಿರೋನಾಮೆ ಕೆಳಗೆ ತುಳುನಾಡು ಪುಸ್ತಕದ ಪುಟ 157ರಿಂದ ಕೆಲ ಪುಟಗಳಲ್ಲಿ "2, 3, ಶತಮಾನಗಳಿಂದೀಚೆಗೆ ನಮ್ಮ ನಾಡಿಗೆ ಹೊರಗಿನ ಕೆಲವು ಬ್ರಾಹ್ಮಣ ವರ್ಗಗಳು ವಲಸೆ ಬಂದವು. (1) ತೋಟಿಗ, (2) ಖರಾಡೆ, (3) ಚಿತ್ತಪಾವನ, (4) ಗೌಡಸಾರಸ್ವತ ಬ್ರಾಹ್ಮಣರು. ಇವರು ಅಲ್ಪ ಸಂಖ್ಯಾಕರಾದುದರಿಂದ ನಿಂದಾಸ್ಪದ ಉಲ್ಲೇಖಗಳಿಗೆ ಒಳಗಾಗಬೇಕಾಯಿತು." ಇತ್ಯಾದಿ ಸಹ್ಯಾದ್ರಿಖಂಡ ಹಾಗೂ ಶಿವಳ್ಳಿಯವರ ಮೇಲೆ ಕಟಾಕ್ಷವಿಟ್ಟು ಗುರುರಾಜ ಭಟ್ಟರು ಬರೆಯುತ್ತಾರೆ. ಇದರ ಕುರಿತು ಸತ್ಯಾಸತ್ಯತೆಯನ್ನು ವಿವೇಚಿಸಬೇಕಾಗಿದೆ.

## 1. ತೋಟಿಗ ಬ್ರಾಹ್ಮಣರು

ಉಲ್ಲಿಂಖಿತೊ ಜನಾಃ ಕೇಚಿತ್ ಕೇಚಿತ್ ಆರಾಮ ಕಾರಿಣಃ |
ವೇದಬಾಹ್ಯಾಃ ಕ್ರಿಯಾಶೂನ್ಯಾಃ ತಂತು ಮಾತ್ರಾಃ ದ್ವಿಜಾತಯಃ

ಎಂದು ಸಹ್ಯಾದ್ರಿಯಲ್ಲಿ ಬರೆದಿದೆ. ಇದರಲ್ಲಿ ಆರಾಮ ಕಾರಿಣಃ ಎಂಬ ಪದದಿಂದ ತೋಟಿಗರೆಂದು ಉಕ್ತವಾಗಿದೆ. ಆರಾಮ=ತೋಟ. ಈ ಶ್ಲೋಕವು ತುಳುಗ್ರಾಮ ಪದ್ಧತಿಯಿಂದ ಉದ್ಧೃತವಾಗಿಲ್ಲ. ತುಳುವರ ಸಂಪರ್ಕವಿಲ್ಲದೆ ಸಾಹೇಬರು ಛಾಪಿಸಿದ ಪುಸ್ತಕದಿಂದ ಆರಿಸಿಯದೆ. ಸರ್ವ ಸಮ್ಮತ ಗ್ರಂಥಾಧಾರದಿಂದ ತುಳುವರು ತಮ್ಮ ಧಾರ್ಮಿಕ ಕೃತ್ಯಗಳಲ್ಲಿ ಅವರನ್ನು ದೂರವಿಡುತ್ತಿದ್ದರು ಎಂಬುದು ನಿಜ. ಗೀತಾದಲ್ಲಿ ಹೇಳಿದಂತೆ "ತಸ್ಮಾತ್ ಶಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯ ವ್ಯವಸ್ಥಿತೌ" ಕರ್ತವ್ಯ ಮತ್ತು ಅಕರ್ತವ್ಯ ಇವುಗಳ ನಿಶ್ಚಯಕ್ಕೆ ಶಾಸ್ತ್ರವೇ ಪ್ರಮಾಣವೆಂಬುದಾಗಿ ಶಿವಳ್ಳಿಯವರ ನಡತೆ ಇದೆ. ತಮ್ಮ ಆಚರಣೆಯನ್ನು ದೂರದೇಶದವರು ಕೇಳಿದಾಗ ಹೇಳುವುದೂ ಇದೆ. ಶ್ರೀಮಠದವರನ್ನು ಕೇಳಿದಾಗ ಶಾಸ್ತ್ರವನ್ನಾಧರಿಸಿ ಸಂಪ್ರದಾಯ ವನ್ನು ತಿಳಿಸಿ ರಾಯಸ ಕಳಿಸಿದ್ದುಂಟು. ಆದರೆ ಈಗಿನ ವಿದೇಶೀ ಸರಕಾರದಲ್ಲಿ ಹೊಸ ಸುಧಾರಣೆಯಾಗುತ್ತಾ ವಿರುದ್ಧ ಮತೀಯರು ನ್ಯಾಯಾಧೀಶರಾಗಲು ಸಂಪ್ರದಾಯಗಳ ನ್ನರಿಯದೆ ತಮ್ಮ ತಿಳುವಳಿಕೆಯಂತೆ ತೀರ್ಪು ಕೊಡುತ್ತಾರೆ. ಅದು ಮಾನ್ಯವೂ ಆಗ ಬೇಕಾಗುತ್ತದೆ. ಒತ್ತಾಯದ ಮೇಲೆ ಅದನ್ನು ಅನುಸರಿಸಬೇಕಾದರೂ ಹಿಂದಿನ ಸಂಪ್ರದಾಯ ಚಿರಕಾಲದಿಂದ ನಡೆದುಬಂದದ್ದು ಶುದ್ಧ ತಪ್ಪೇ ಎಂದು ಒಪ್ಪಬೇಕಾಗಿಲ್ಲ. ಕಾಂಗ್ರೆಸ್ ಸರಕಾರದ ಧೋರಣೆಯಂತೆ ಬೇಂಕು ರಾಷ್ಟ್ರೀಕರಣ, ಭೂ-ಸುಧಾರಣೆ, ಅಸ್ಪೃಶ್ಯತಾ ನಿವಾರಣೆ, ಪ್ರೌಢ ವಿವಾಹ, ಇತ್ಯಾದಿಗಳು ಕಾಯದೆ ಬದ್ಧವಾಗಿ ಈಗ ನಡೆದುಕೊಳ್ಳಬೇಕಾಗಿ ಬಂದರೂ, ಮೊದಲು ಸಾಹುಕಾರಿಕೆ ಬೇಂಕು, ಜಮಿನಾನುದಾರಿಕೆ, ಅಸ್ಪೃಶ್ಯತಾಚರಣೆ, ಬಾಲ್ಯವಿವಾಹ, ಇವುಗಳು ತಪ್ಪೆಂದಾಗುತ್ತದೋ? ನ್ಯಾಯ ತೀರ್ಮಾನವಾದರೂ ಸರಕಾರದ ಧೋರಣೆಗೆ ಅನುಸರಿಸಿಯೇ ಇರುತ್ತದೆಯಲ್ಲವೇ? ರಾಜಕೀಯ ಜುಲ್ಮಿಯು ಧರ್ಮದ ಮೇಲೆ ಯಾವಾಗಲೂ ಇದ್ದೇ ಇದೆ. ಮುಸಲ್ಮಾನರ ಆಳಿಕೆಯಲ್ಲಿಯೂ ಇತ್ತು. ಇಂಗ್ಲೀಷರ ಆಳಿಕೆಯಲ್ಲಿಯೂ ಆಗಿದೆ. ಇಂಗ್ರೇಜೀ ರಾಜ್ಯ ಬಂದ ಮೇಲೆ ಅಸಮಾನ ಜಾತೀಯರು ಸಮಾನಜಾತಿಯವರೆಂದು ದಾವೆ ತರುತ್ತಾರೆ. ಶೃಂಗೇರಿ ಮಠದವರು ಬೇಕಾದಂತೆ ರಾಯಸ ಬರೆಯಿಸಿ ಕೊಡುತ್ತಾರೆ. ಡಿಕ್ರಿ ಆಗುತ್ತದೆ. ಅದರ ವಿರುದ್ಧ ನಡೆಯಬಾರದು. ಅದೆಲ್ಲ ರಾಜಕೀಯ. ಅದರಲ್ಲಿ ಧರ್ಮಶಾಸ್ತ್ರಕ್ಕೆ ಅವಕಾಶವಿಲ್ಲ. ಯಹೂದಿಯವರು ಯೇಸುಕ್ರಿಸ್ತನ ವಿರುದ್ಧ ರೋಮ್ ಸರಕಾರದ ಕೋರ್ಟಿನ ಮುಂದೆ "ಅಧರ್ಮಪ್ರಚಾರ ಮಾಡುತ್ತಾ ಶಾಸ್ತ್ರಕ್ಕೆ ವಿರುದ್ಧ ನಡೆಯುತ್ತಾನೆ" ಎಂದು ದಾವೆ ತಂದರು. ಶೂಲಕ್ಕೇರಿಸುವಂತೆ ಹುಕುಂ ಆಯಿತು. ಆದರೆ ಹುಕುಮಿನ ವಿರುದ್ಧ ತಡೆಹಿಡಿಯಲು ಯಾರೂ ಮುಂದೆ ಬರಲಿಲ್ಲವಷ್ಟೇ? ಅಲ್ಲದೆ

ಯೇಸು ಅಧರ್ಮಪ್ರಚಾರ ಮಾಡಿದ ಎನ್ನಲು—ಆಗಲೂ, ಈಗಲೂ, ಯಾರಾದರೂ ತಯಾರಿದ್ದಾರೋ? ಅಚ್ಯುತ ಶರ್ಮರು ತನ್ನ ಪುಸ್ತಕದ 58-65 ಪುಟದ ವರೆಗೆ ಚಿತ್ರದುರ್ಗದ ದಾವೆಯ ಕುರಿತು ಪ್ರಸ್ತಾಪಿಸಿ ಮಾಧ್ವರ ವ ಮಾಧ್ವಪೀಠಗಳ ಮೇಲೆ ಸೇಡು ತೀರಿಸಿದ್ದೇನೆಂದು ಹೆಮ್ಮೆ ಪಡುತ್ತಾರೆ. ಹಿಂದೆ ಹೇಳಿದಂತೆ ವಿಶ್ವಕರ್ಮ ಬ್ರಾಮ್ಹಣರೆಂಬ ಬಡಗಿಯವರಿಗೆ ಚಿತ್ತೂರು ಕೋರ್ಟು ಡಿಕ್ರಿ ಇದೆ. ಶೃಂಗೇರಿ ಮಠದ ರಾಯಸವಿದೆ. ಅಚ್ಯುತಶರ್ಮರು ಬಡಗಿಯವರ ಕೂಡ ರೋಟೀ ಭೇಟೀ ವ್ಯವಹಾರ ನಡೆಸುತ್ತಾರೆಯೇ? ಕೇಳಬೇಕಾಗಿದೆ! ಅದೂ ಇಲ್ಲ—ಇದೂ ಇಲ್ಲ.

ಮತ್ತೊಂದು ವಿಷಯ—"ಶೃಂಗೇರಿ ಮಠದ ಶಿಷ್ಯವರ್ಗದವರಾದ ಕನ್ನಡ ಜಿಲ್ಲೆಯ ಸ್ಮಾರ್ತ ಬ್ರಾಮ್ಹಣರಲ್ಲಿ ತೋರಿಸುತ್ತಿರುವ ತಾತ್ಸಾರ ಭಾವನೆಯು ಇದರಿಂದ ವ್ಯಕ್ತ ವಾಗುತ್ತದೆ" ಎಂದು ಅಚ್ಯುತ ಶರ್ಮರು ಶೀವಳ್ಳಿ ಮಾಧ್ವರನ್ನು ಬೈಯಲು ಮುಂದೆ ಬಂದಿರುತ್ತಾರೆ. ಆದರೆ ತಾವು ತಮ್ಮ ಗುರುಮಠವಾದ ಶೃಂಗೇರಿ ಮಠದ ಶಿಷ್ಯವರ್ಗ ದವರನ್ನೇ (ಬಡಗಿಯವರನ್ನೇ) ತಾತ್ಸಾರಮಾಡುವುದನ್ನು ಮರೆತುಬಿಡುತ್ತಾರೆ. ಎಷ್ಟು ಸಮಯ ಸಾಧಕತಾ ಅಚ್ಯುತ ಶರ್ಮರಿಗಿದೆ. ಮತ್ತು ಶ್ರೀ ಭಟ್ಟರು ಪುಟ 157ರಲ್ಲಿ "ತೋಟಿಗರಲ್ಲಿ ಮಾಧ್ವರೂ, ಸ್ಮಾರ್ತರೂ ಇದ್ದಾರೆ" ಎಂದು ಬರೆಯುತ್ತಾರೆ. ಹಾಗಾ ದರೆ ಮಾಧ್ವ-ತೋಟಿಗರಲ್ಲಿ ತಾತ್ಸಾರ ಭಾವನೆ ಮಾಡದೆ ಕೇವಲ ಶೃಂಗೇರಿ ಮಠದ ಶಿಷ್ಯರಾದ ಸ್ಮಾರ್ತರಲ್ಲಿ ಮಾತ್ರ ಶೀವಳ್ಳಿಯವರು ತಾತ್ಸಾರ ಮಾಡುತ್ತಿರುವುದು ಎಂದು ಅಚ್ಯುತ ಶರ್ಮರು ಹೇಳುತ್ತಾರೋ? ಅಥವಾ ಮಾಧ್ವ-ತೋಟಿಗರೂ ಶೃಂಗೇರಿ ಮಠದ ಶಿಷ್ಯರು ಎಂದು ಬಯಸುತ್ತಾರೋ? ಅಥವಾ ಮಾಧ್ವರಲ್ಲಿ ಅಡಿಗೆ ಮಾಡಲು ಹೋದಾಗ ನಾಮಮುದ್ರೆ ಹಚ್ಚಿಕೊಂಡು ಮಾಧ್ವರಾಗುತ್ತಾರೋ? ಸ್ಮಾರ್ತರಲ್ಲಿ ಹೋದಾಗ ತ್ರಿಪುಂಡ್ರಧಾರಣಮಾಡಿ ಸ್ಮಾರ್ತರಾಗುತ್ತಾರೋ? ಒಟ್ಟಾರೆ ಶೃಂಗೇರಿ ಮಠದ ಶಿಷ್ಯರ ಹೀಗೆ ಅಭಿಪ್ರಾಯವೋ? ಏನೇ ಇರಲಿ. ಮಾಧ್ವ ಶೀವಳ್ಳಿಯವರು ಮಾತ್ರ ಯಾವ ಹೊಸ ಬದಲಾವಣೆಗಳನ್ನು ಮಾಡದೆ ವೊದಲಿನಿಂದಲೂ ಬಂದ ರಿವಾಜನ್ನು ನಡೆಸಿಕೊಂಡು ಬಂದಿದ್ದಾರಲ್ಲದೆ ದ್ವೇಷಾಸೂಯಾ ಮೂಲಕ ಯಾವ ಸಮಾಚಾರವನ್ನೂ ನಡೆಸಿಲ್ಲ. ಇದರಿಂದ ಹೊಸ ಬದಲಾವಣೆಯಾಗಿ ತಾವು ಶ್ರೇಷ್ಠ, ಉತ್ತಮೋತ್ತಮ ರಾಗಬೇಕೆನ್ನುವವರಿಗೆ ಪ್ರತಿಕೂಲವಾಗುತ್ತದೆಂಬುದು ನಿಜ. ಅದಕ್ಕೆ ಯಾರು ಏನು ಮಾಡಲು ಸಾಧ್ಯ! ಶಾಸ್ತ್ರಗಳು ಸುಳ್ಳಾಗಬೇಕೆಂದು ಬಯಸಿದರೆ ಅದು ಸಾಧ್ಯವಾಗ ಬಹುದೋ?

## 2. ಖರಾಡೆ ಬ್ರಾಮ್ಹಣರು

ಮುದ್ರಿತ ಸಹ್ಯಾದ್ರಿಯಲ್ಲಿ ಈ ಕೆಳಗಿನ ಶ್ಲೋಕಗಳನ್ನು ಕಾಣಬಹುದು—

"ಕರ್ಹಾಡ ದೇಶನಾಮಾ ಚ ದುಷ್ಟದೇಶಃ ಪ್ರಕೀರ್ತಿತಃ |
ಸರ್ವಲೋಕಾಶ್ಚ ಕಠಿನಾಃ ದುರ್ಜನಾಃ ಪಾಪಕಾರಿಣಃ |

ತದ್ದೇಶೇ ಮಾತೃಕಾ ದೇವೀ ಮಹಾದುಷ್ಟಾ ಕುರೂಪಿಣೀ |
ತಸ್ಯಾಃ ಪೂಜಾ ಯದಾಬ್ದೇ ಚ ಬ್ರಾಮ್ಹಣೋ ದೀಯತೇ ಬಲಿಃ |
ವಿಶೇಷತಶ್ಚ ಜಾಮಾತಾ ಹ್ಯಥವಾ ಭಗಿನೀಸುತಃ |
ತಸ್ಯಾಃ ದೇವ್ಯಾಃ ಕೃತೋ ಯಜ್ಞಃ ಸರ್ವತ್ರ ವಿಜಯ ಪ್ರದಃ || "

ಇವರ ತಾತ್ಪರ್ಯ ಭಟ್ಟರು ಹೀಗೆ ವಿವರಿಸುತ್ತಾರೆ. (ಪು. 158). "ಖರಾಡ ಬ್ರಾಮ್ಹಣರು ವಾಸಮಾಡುವ ದೇಶ ಕೇವಲ ದುಷ್ಟ ಪ್ರದೇಶವಾಗಿರುತ್ತದೆ. ಇಲ್ಲಿ ವಾಸ ಮಾಡುವ ಜನರು ಕಾಠಿಣ್ಯ ಉಳ್ಳವರಾಗಿಯೂ, ದುರ್ಜನರಾಗಿಯೂ, ಪಾಪಕರ್ಮಿಗಳಾಗಿಯೂ ಇರುತ್ತಾರೆ. ಆ ದೇಶದ ಮಾತೃಕಾದೇವಿಯು ಮಹಾದುಷ್ಟಳು. ಆ ದೇವಿಯ ಪೂಜಾಕಾಲದಲ್ಲಿ ವರ್ಷಕ್ಕೊಂದು ಬಾರಿ ಪೂಜೆ ನಡೆಯುವಲ್ಲಿ ಬ್ರಾಮ್ಹಣರನ್ನು ಬಲಿಯಾಗಿ ಕೊಡುತ್ತಾರೆ. ಹತ್ಯೆಯನ್ನು ಮಾಡಿದವರಿಗೆ ದುಷ್ಟಳಾದ ದೇವಿಯು ವರವನ್ನು ಅನುಗ್ರಹಿಸುವಳು. ಇಂಥವರ ಸಂಸರ್ಗದಿಂದ ಸಚೈಲ ಸ್ನಾನಮಾಡಬೇಕು. ಅವರು ವಾಸಮಾಡಿದ 3 ಯೋಜನ ದೂರದಲ್ಲಿ ವಾಯುವೂ, ಅಗ್ನಿಯೂ ಗ್ರಹಣಕ್ಕೆ ಅಯೋಗ್ಯವಾಗಿರುತ್ತದೆ." ಅದರ ಮುಂದೆ ತನ್ನ ರಿಸರ್ಚನ್ನು ಮಾಡುತ್ತಾ ಬರೆಯುತ್ತಾರೆ. "ಮೇಲಿನ ವಿವರವು ಅಹಿತವಾದುದು. ಈ ತೀರ್ಮಾನಕ್ಕೆ ಏನೂ ಆಧಾರವಿಲ್ಲ. ಇಂಥಾ ಅಭಿಪ್ರಾಯಕ್ಕೆ ಚಾರಿತ್ರಿಕ ಬೆಂಬಲ ಸಿಕ್ಕಲಾರದು. ತುಳುವಕ್ಕೆ ಇವರು ಹೊರಗಿನವರು ಮತ್ತು ಅಲ್ಪ ಸಂಖ್ಯಾಕರು. ಆದುದರಿಂದ ಈ ನಿಂದಾಸ್ಪದ ಲೇಖಗಳಿಗೆ ಒಳಗಾಗಬೇಕಾಯಿತು ಎಂದಿಷ್ಟೇ ಹೇಳಬಹುದು" ಇತ್ಯಾದಿ. ಭಟ್ಟರ ಈ ಲೇಖದಿಂದ ಅವರ ಮನಸ್ಸಿನಲ್ಲಿ ತುಳುವ ಶಿವಳ್ಳಿಯವರ ಮೇಲೆ ಎಷ್ಟು ನಂಜು ಹುದುಗಿದೆ ಎಂಬುದು ಗೊತಾಗುತ್ತದೆ. ಮಾತ್ರವಲ್ಲದೆ ಚರಿತ್ರೆ ಬರೆಯುವ ಹೆಮ್ಮೆ ಇದ್ದರೂ ಚರಿತ್ರೆಯ ಅಜ್ಞಾನ ಎಷ್ಟು ಇದೆ ಎಂಬುದೂ ತಿಳಿಯಬಹುದಾಗಿದೆ.

ಖರಾಡೆಯವರ ವಿಷಯದಲ್ಲಿ ಒಂದು ಗಾದೆ ಮಾತು ಮಹಾರಾಷ್ಟ್ರ ಭಾಷೆಯಲ್ಲಿದೆ. "ಕಸಾಯಾ ಚಾ ವಿಶ್ವಾಸ ಧರವೇಲ ಪಣ ಖರಾಡಾಂ ಚಾ ಧರವಣಾರ ನಾಹಿ" ಕಟುಕರವನಲ್ಲಿ ವಿಶ್ವಾಸವಿಡಬಹುದು. ಖರಾಡೇರ ಮೇಲೆ ವಿಶ್ವಾಸವಿಡಲು ಸಾಧ್ಯವಿಲ್ಲ ಎಂದು ಅರ್ಥ. ಪ್ರಸಿದ್ಧ ವಿದ್ವಾಂಸರಾದ ಬಾಳಾಜಿ ವಿಠಲ ಗಾಂವಸ್ಕರ ಇವರ ವಿಷಯದಲ್ಲಿ ಬರೆಯುತ್ತಾರೇನೆಂದರೆ "ಮಿಸ್ಟರ್ ಬಿಲಿಫರ್ಡ್ ಮತ್ತು ಕೆಂಬೆಲ ಇವರ ಮತವಿದೆಯಲ್ಲ, ಈ ಜನರು 12 ನೂರು ವರ್ಷಗಳ ಹಿಂದೆ ಚೀನಾದಿಂದ ಬಂದವರು. ಈ ಮಾತು ನನಗೂ ಸತ್ಯ ಕಾಣುತ್ತದೆ. ಏಕೆಂದರೆ? ಮನುಷ್ಯರನ್ನು ಕೊಲ್ಲುವ ರೂಢಿ ಚೀನಾ ದೇಶದಲ್ಲಿದೆ. ಅದೇ ಇವರಲ್ಲಿಸಹಾ ಕಂಡುಬರುತ್ತದೆ. ಹೇಮಾದ್ರಿ ಧರ್ಮಗ್ರಂಥದಲ್ಲಿ ಚೀನಾ ಬ್ರಾಮ್ಹಣರ ವರ್ಣನೆ ಏನು ಬರುತ್ತದೆ? ಅದು ಈ ಖರಾಡೆಯವರದ್ದೇ ಆಗಿದೆ. ರತ್ನಗಿರಿ ಗಜೇಟಿಯರದಲ್ಲಿ ಸಹ ಖರಾಡೆಯವರ ವಿಷಯವಾಗಿ ಬರೆಯಲ್ಪಟ್ಟದೆ. "ಪ್ರಾಚೀನ ಕಾಲದಲ್ಲಿ ಖರಾಡೆಯವರು ವಂಶ ಅಭಿವೃದ್ಧಿ ಆಗಬೇಕೆಂತಲೂ ಸರ್ವತ್ರ

ವಿಜಯ ಆಗಬೇಕೆಂತಲೂ ತಮ್ಮ ಅಳಿಯ, ಭೇಟಿಗೆ ಬರುವವರು, ಮತ್ತು ಅತಿಥಿಗಳು, ಇವರನ್ನು ತಮ್ಮ ದೇವಿಗೆ ಬಲಿಕೊಡುತ್ತಿದ್ದರು. ಈ ಪ್ರಕಾರದ ಒಂದು ಘಟನೆಯನ್ನು ಬಿಲಿಫರ್ಡನು ಆಶ್ಚರ್ಯದಿಂದ ಬರೆಯುತ್ತಾನೆ. ಕಂಪನೀ ರಾಜ್ಯದಲ್ಲಿ ಇವತ್ತಿಗೂ ಗುಪ್ತರೀತಿಯಿಂದ ನರಮೇಧ ಬಹಳವಾಗಿಯೇ ಪ್ರಚಲಿತವಿದೆ. ದಶಹರದಲ್ಲಿ ಖರಾಡೆಯ ನರ ಯಜ್ಞ ನಡೆಯುತ್ತದಲ್ಲಾ? ಅದು ನರಮೇಧವೆಂದೇ ಹೇಳಲ್ಪಡುತ್ತದೆ. ಡಾ| ಕಾಲೆ ಯರ ಹೇಳುತ್ತಾನೆ—ಬಾಳಾಜಿ ಬಾಜಿರಾವ್ ಪೇಶ್ವೆ ಇವರ ಸಮಯದಲ್ಲಿ ಪುಣೆಯಲ್ಲಿ ನಡೆದ ಕಥೆ ಇದು. ಒಂದು ದಿನ ಒಬ್ಬ ಖರಾಡೆಯವನು ತನ್ನ ಮನೆ ಮುಂದೆ ಬಾವಿಯ ಹತ್ತಿರ ಕೂತಿದ್ದ ಪ್ರಯಾಣಿಕನನ್ನು ನೋಡಿ ಮುಂದಿನ ನವರಾತ್ರಿಗೆ ಬಲಿ ಕೊಡಲು ಒಳ್ಳೆ ಶಿಕಾರಿ ಆಗಿದೆ ಎಂದು ಆಲೋಚಿಸಿ ಆತನನ್ನು ಕರೆದು ಮನೆಯಲ್ಲಿ ಕೂಡಿಸಿ ಸತ್ಕರಿಸಿದನು. ಕೆಲವು ಸಮಯದ ನಂತರ ಆತನು ಹೋಗಲು ತಯಾ ರಾದಾಗ ನವರಾತ್ರಿ ವರೆಗೆ ನಿಃಸಂಶಯ ಮನೆಯಲ್ಲಿ ಉಳಿಯುವಂತೆ ಮಾಡಲು ತನ್ನ ಮಗಳ ಕೂಡೆ ವಿವಾಹ ಮಾಡಿಸಿಬಿಟ್ಟನು. ಆದರೆ ಮಗಳು ಮಾತ್ರ ಬಲಿ ಪಶುವನ್ನು ಬಹಳವಾಗಿ ಪ್ರೀತಿಸುತ್ತಿದ್ದಳು. ಇದರಿಂದ ನವರಾತ್ರಿ ಸಮಯದಲ್ಲಿ ಇದರ ರಹಸ್ಯ ಹೊರಬಿದ್ದು ಅಪರಾಧಿ ಹಿಡಿಯಲ್ಪಟ್ಟು ದಂಡಿಸಲ್ಪಟ್ಟನು. ಪೇಶ್ವೆ ಸರಕಾರವು ಇಂಥಾ ಜನರನ್ನು ಪೂನಾದಿಂದ ಹೊರಹಾಕಿತು." ಹೀಗೆಲ್ಲಾ ಬಿಳೇ ವರ್ಣದ ಯುರೋಪದ ಮಹರ್ಷಿಗಳೂ ಬರೆದಿರುತ್ತಾರೆ. ಇದರಂತೆನೇ ಇಲ್ಲಿಯ ಕಪ್ಪು ಬಣ್ಣದ ಋಷಿಗಳು ಬರೆದ ಸಹ್ಯಾದ್ರಿಖಂಡದ ಮಾತುಗಳೂ ಇವೆ. ವಿಷಯ ಒಂದೇ ಆದರೂ ಯುರೋಪ ಸಾಹೇಬರು ಬರೆದರೆ ಸತ್ಯ, ಇಲ್ಲಿಯ ಬ್ರಾಮ್ಹಣರು ಬರೆದರೆ ಸುಳ್ಳು ಎಂಬಂತೆ ಇದರಲ್ಲಿ ಅತ್ತೆ-ಸೊಸೆ ಗಾದೆ ಬರುವಂತಿದೆಯೆ? ಪೇಶ್ವೆ ಸರಕಾರ ದಂಡಿಸಿಯದೆ. ಗಜೇಟಿಯರ ದಲ್ಲಿ ಬರೆದಿದೆ. ಅನೇಕ ದೇಶ-ವಿದೇಶ ಜನರ ಸಮ್ಮತಿ ಇದೆ. ಅಂದಮೇಲೆ ಚಾರಿತ್ರಿಕ ಬೆಂಬಲವಿಲ್ಲ, ಆಧಾರವಿಲ್ಲ ಎಂಬುದರ ಅರ್ಥವೇನು? ಆ ಚರಿತ್ರೆಯನ್ನು ಆ ಆಧಾರ ವನ್ನು ತಾನು ನೋಡಲಿಲ್ಲವೆಂದು ತಾನೇ?

ಓ ಗುರುರಾಜ ಭಟ್ಟರೇ! ಈಗಿನ ಖರಾಡೆಯವರ ಪೂರ್ವಿಕರು ಮಾಡಿದ ಅನಾ ಚಾರಕ್ಕಾಗಿ ಆ ಕಾಲದ ಮಾನವರಾಗಲೀ, ಪುರಾಣದ ಋಷಿಗಳಾಗಲಿ, ಈಗಿನ ಸಂಶೋಧಕರಾಗಲಿ, ಯುರೋಪಿನ ಬಿಳೇ ಬಣ್ಣದವರಾಗಲಿ ಬರೆಯುತ್ತಾರೆ—ಬರೆದವ ರನ್ನು ಹಳಿಯುವುದಕ್ಕಿಂತ ಮಾಡಿದವರನ್ನು ನಿಂದಿಸಲು ಕಲಿಯಿರಿ. ಶೀವಳ್ಳಿಯವರು ಸಾಧುಗಳೆಂದು ಲೇಖನಿಯ ಹೊಣೆಗಾರಿಕೆಗೆ ಅಪಚಾರವೆಸಗಬೇಡಿರಿ. "12 ವರ್ಷ ಗದಾಯುದ್ಧ ಕಲಿತು ಮನೆಮುದುಕಿ ಟೊಂಕ ಮುರಿದ" ಎಂಬ ಗಾದೆಯಂತೆ ಎಂ.ಎ., ಕಲಿತು ಸಂಶೋಧಕರಾಗಿ ಪ್ರಿನ್ಸಿಪಾಲನಿದ್ದೇನೆಂದು ತಮ್ಮ ಹಿರಿಯರಿಗೆ ಬೈಯುವ ಹೀನ ವೃತ್ತಿಗೆ ಇಳಿಯಬೇಡಿರಿ. ಇದೇ ನನ್ನ ಕೋರಿಕೆ. ಅಂತೂ ಖರಾಡೆಯವರು ನಿರ್ದೋಷಿ ಗಳಲ್ಲ. ಮತ್ತು ನಿರ್ದೋಷಿಗಳಲ್ಲವೆಂದರೆ ತಪ್ಪೂ ಅಲ್ಲ.

## 3. ಚಿತ್ಪಾವನರು

"ಸಹ್ಯಾದ್ರಿಯಲ್ಲಿ ಚಿತ್ತಪಾವನರ ಉತ್ಪತ್ತಿಯನ್ನು ವಿಚಿತ್ರರೀತಿಯಲ್ಲಿ ಮನಸನ್ನು ಉದ್ರೇಕಿಸುವಂತೆ ಕೊಟ್ಟಿದೆ. ಚಿತೆಯ ಸ್ಥಾನದಲ್ಲಿ ಪವಿತ್ರತ್ವವನ್ನು ಪಡೆದದ್ದರಿಂದ ಚಿತ್ಪಾವನರಾದರು ಎಂಬುದರ ಅನರ್ಥವನ್ನು ಯೋಚಿಸಿ ತೀರದು. ಇವರು ಪರಿಶುದ್ಧ ಬ್ರಾಹ್ಮಣರು, ಇವರು ಸ್ಮಾರ್ತ ಬ್ರಾಹ್ಮಣರು, ಶೃಂಗೇರಿ ಮಠದ ಅವಲಂಬಿಗಳು ಇತ್ಯಾದಿ ಬರೆದು ಭಟ್ಟರು ಸಹ್ಯಾದ್ರಿ ಮತ್ತು ಅದನ್ನು ಬರೆದವರಿಂದು ಗ್ರಹಿಸಿ ಶೀನಪ್ಪ ಯವರ ಮೇಲೆ ವಿಷ ಕಾರಿದ್ದಾರೆ. :ಆದರೆ ಇವರು ಪರಿಶುದ್ಧರೂ ಇಲ್ಲ, ಬ್ರಾಹ್ಮಣರೂ ಅಲ್ಲ. ಈಜಿಪ್ತದ ಯೆಹೂದಿ ಜನರು ಇಲ್ಲಿ ಬಂದ ಮೇಲೆ ಬ್ರಾಹ್ಮಣರ ಮಹತ್ವವನ್ನ ರಿತು ಬ್ರಾಹ್ಮಣರಾಗುವುದೊಳಿತೆಂದು ಭಾವಿಸಿ ಬ್ರಾಹ್ಮಣರಾದವರು ಅಂತ ಇತಿಹಾಸ ಹೇಳುತ್ತದೆ. ವೈದಿಕ ಸಂಪತ್ತಿ ಎಂಬ ಗ್ರಂಥದಲ್ಲಿ ಚಿತ್ಪಾವನರ ಕುರಿತು "ವಿದೇಶಿ ಯೊಂಕಾ ದ್ವಿತೀಯದಳೊಂಕಾ ಆಗಮನ ಚಿತ್ಪಾವನ ಲೋಕ" ಎಂಬ ಶಿರೋನಾಮೆ ಕೆಳಗೆ ಒಂದು ಲೇಖ ಬರೆದು ಅನೇಕ ವಿಮರ್ಶಕರ ವಾಕ್ಯಗಳನ್ನು ಉದಾಹರಿಸಿ ಜೂಸ್, ಯೆಹೂದಿ ಎಂದು ಸಮರ್ಥನೆ ಮಾಡಿ ಈಜಿಪ್ತವಾನ್, ಜಿಪ್ತವಾನ್, ಚಿಪ್ತವಾನ್, ಚಿತ್ಪಾವನ ಹೀಗೆ ವ್ಯುತ್ಪತ್ತಿ ಸಹಾ ಮಾಡಿ ತೋರಿಸಿಯದೆ. ಆ ಲೇಖದ ಸಾರಾಂಶ ಹೀಗಿದೆ--

"ಆಫ್ರಿಕಾದ ಒಂದು ಪ್ರಾಂತ ಮಿಶ್ರದೇಶ ಎಂದಿದೆ. ಅದಕ್ಕೆ ಈಗ ಈಜಿಪ್ತ ವೆನ್ನುತ್ತಾರೆ. 16-17 ಶತಮಾನದ ಹಿಂದೆ ಅಲ್ಲಿಯ ನಿವಾಸಿಗಳು ಇಲ್ಲಿ ಬಂದು ನೆಲಸಿದರು. ಆರಂಭದಲ್ಲಿ ಇವರ ಪ್ರಸಿದ್ಧಿ ಇರಲಿಲ್ಲ. ಬರಬರುತ್ತಾ ಅವರ ಒಂದು ಶಾಖೆಯು ದೊಡ್ಡದೊಂದು ರಾಜ್ಯ ಸ್ಥಾಪನೆ ಮಾಡಿತು. ಜೇಮ್ಸ್ ಬರ್ಜಿಸ್ ಎಂಬ ಯುರೋಪಿನ ಶೋಧಕನು ಬರೆಯುತ್ತಾನೆ. ಈ ಯೆಹೂದಿ ಜನರು A. D. 3-4ನೇ ಶತಾಬ್ಧಿಯಲ್ಲಿ ಬಂದು ನೆಲಸಿದರು. ಇವರು ನೌಕಾದಲ್ಲಿ ಕೂತುಕೊಂಡು ಬಂದರು. ಆ ನೌಕೆಯು ಭಾರತೀಯ ಕಿನಾರೆ ತಲಪುತ್ತಲೇ ಒಡೆದು ಹೋಯಿತು. ಅವರು ಈಸಿ ಕೊಂಡು ದಡಹತ್ತಿದರು. ಸತ್ತವರ ಹೆಣಗಳನ್ನೆಲ್ಲಾ ಒಂದೇ ಚಿತೆಯಲ್ಲಿಟ್ಟು ಸುಟ್ಟರು. ಆ ಗ್ರಾಮದಲ್ಲಿ ಅಂತ್ಯಜರ 14 ಕುಟುಂಬಗಳು ಇರುತಿತ್ತು. ಅಲ್ಲಿಯೇ ಇವರೂ ಇರಹತ್ತಿದರು. ಇದರ ಸಾರಾಂಶವೇ ಸ್ಕಾಂದಪುರಾಣದಲ್ಲಿ ಹೇಳಿದೆ. ಇವರು ಮೊದಲು ನಿಷಿದ್ಧ ಕರ್ಮ ಮಾಡುತ್ತಿದ್ದರು, ಮಾಂಸ ತಿನ್ನುತ್ತಿದ್ದರು ಮತ್ತು ಕನ್ಯಾ ವಿಕ್ರಯ ಮಾಡುತ್ತಿದ್ದರು. ಹೀಗೆ ಕೆಲವು ಸಮಯ ಇರುತ್ತಿದ್ದು ಇಲ್ಲಿ ಬ್ರಾಹ್ಮಣರ ಪ್ರತಿಷ್ಠೆ ಬಹಳ ಇರುವುದನ್ನು ಕಂಡು ಬ್ರಾಹ್ಮಣರಾಗುವುದು ಒಳ್ಳೇದು ಎಂದು ಭಾವಿಸಿ ಬ್ರಾಹ್ಮಣರಾದರು. ಚಿತ್ತಪಾವನ ಬ್ರಾಹ್ಮಣರೆನ್ನಹತ್ತಿದರು. ಸಂಸ್ಕೃತ ಕಲಿಯ ಹತ್ತಿದರು. ಈ ವಿಷಯದಲ್ಲಿ ಇನ್ನು ಹೆಚ್ಚು ಪ್ರಮಾಣ ಹುಡುಕುವ ಆವಶ್ಯಕತೆ ಉಳಿ ದಿಲ್ಲ. ಏಕೆಂದರೆ, ಅದೇ ಜಾತಿಯ ದೊಡ್ಡ ಒಬ್ಬ ಚಿತ್ತಪಾವನ ಬ್ರಾಹ್ಮಣ ವಿಶ್ವನಾಥ ನಾರಾಯಣ ಮಾಂಡಲೀಕ ಇವರಿಂದ ತಮ್ಮ ಜಾತಿಯ ವಿವರಣವು ರಾಯಲ್ ಏಶಿಯಾ

ಟಿಕ್ ಸೊಸ್ಯಾಟಿಗೆ ಬರೆದು ಕಳುಹಿಸಲ್ಪಟ್ಟಿತ್ತು. ಅದರಿಂದ ಗೊತ್ತಾಗುತ್ತದೆಯಲ್ಲ? ಚಿತ್ತ ಪಾವನ ಜಾತಿಯ ಪ್ರಥಮ ಪೂರ್ವಜರು ಹಿಂದುಸ್ಥಾನದ ಪಶ್ಚಿಮ ದಿಕ್ಕಿನಿಂದ ಅರ್ಥಾತ್ ಆಫ್ರಿಕಾದ ಲಗತ್ತು ಕಿನಾರೆಯಿಂದ ನಾವೆಯೊಳಗೆ ಕೂತು ಬಂದವರು" ಎಂದು.

ಅದೂ ಅಲ್ಲದೆ ಲೋಕಮಾನ್ಯ ಟಿಳಕರ ದೊಡ್ಡ ಜೀವನ ಚರಿತ್ರೆ ಬರೆದದ್ದಿದೆ. ಅದರಲ್ಲಿಯೂ ಈ ಮಾತು ಸ್ವೀಕೃತವಾಗಿದೆ. ಅದರ ಒಕ್ಕಣೆ ಮರಾಠಿಯಲ್ಲಿದೆ. ಕನ್ನಡ ಭಾಷಾಂತರ ಕೆಳಗೆ ಕೊಡುತ್ತದೆ. "ಸತ್ಯ ಸಂಶೋಧಕ ಜನರು ಕೊಂಕಣಸ್ಥ ಬ್ರಾಹ್ಮಣ ಜನರನ್ನು ಕುರಿತು ಈ ಜನರು ಭಾರತದವರೇ ಅಲ್ಲ—ಪರದೇಶದವರು. ಹೀಗೆ ಹಂಗಿ ಸುವ ಬುದ್ಧಿಯಿಂದ ಹೇಳುತ್ತಾರೆ ಎಂದು ಅವರ ಮೇಲೆ ಯಾರಿಗಾದರೂ ಸಿಟ್ಟು ಬರ ಬಹುದು. ಪರಂತು ಇತಿಹಾಸದೃಷ್ಟ್ಯಾ ಈ ಮಾತು ಸಂಪೂರ್ಣ ಸುಳ್ಳು ಅಲ್ಲ. ಕೊಂಕ ಣಸ್ಥರ ಕುರಿತು ಸ್ವತಃ ಕೆ. ವಿಶ್ವನಾಥ ನಾರಾಯಣ ಮಾಂಡಲೀಕ 1865ನೇ ಇಸವಿಯ ರಾಯಲ ಏಶಿಯಾಟಿಕ್ ಸೊಸ್ಯಾಟಿಯ ಮುಂದೆ ಇಂಗ್ಲಿಷ್ ನಿಬಂಧದಲ್ಲಿ ಈ ಪ್ರಕಾರ ಒಪ್ಪಿಕೊಂಡಿದ್ದಾರಲ್ಲ. ಚಿತ್ತಪಾವನ ಬ್ರಾಹ್ಮಣರ ಆದ್ಯ ಪೂರ್ವಜರು ಪರಪ್ರಾಂತ ದಿಂದ ನೌಕಾದಲ್ಲಿ ಕೂತುಕೊಂಡು ಬಂದವರಿದ್ದಾರೆ—ಇದು ನಿಶ್ಚಿತ. ಹಿಂದುಸ್ಥಾನಕ್ಕೆ ಬಂದ ಮೇಲೆ ಇಲ್ಲಿಯ ಪೂರ್ವದ ಪಂಚದ್ರಾವಿಡರ ಸಂಬಂಧದಿಂದ ಪಂಚದ್ರಾವಿಡ ರೊಳಗೆ ಪರಿಗಣನೆ ಆಗಲು ಪ್ರಾರಂಭವಾಯಿತು." (ಲೋ. ಟಿಳಕ ಚರಿತ್ರೆ)

"ಈ ಎಲ್ಲಾ ಕಾರಣಗಳಿಂದ ತಿಳಿದುಬರುತ್ತದಲ್ಲ, ಚಿತ್ಪಾವನರು ಮಿಶ್ರದೇಶಿ ನಿವಾಸಿ ಯೆಹೂದಿಯರು. ಅವರು ಯದ್ಯಪಿ ಬ್ರಾಹ್ಮಣರಾದರು. ಆದರೆ ಪರಂಪರಾ ಗತ ಈ ದೇಶದ ಬ್ರಾಹ್ಮಣರು ಅವರನ್ನು ಬ್ರಾಹ್ಮಣರೆಂದು ಮನ್ನಿಸಲಿಲ್ಲ. ಅವರು (ಚಿತ್ಪಾವನರು) ತಮ್ಮ ಕುತ್ಸಿತ ಮತ್ತು ನೀಚ ಆಚಾರಗಳನ್ನು ಪ್ರಚಾರ ಮಾಡಲೂ ಪ್ರಾರಂಭ ಮಾಡಿದರು. ಅದರಿಂದ ಕೋಲಾಹಲವೆದ್ದು ಬೇಗನೇ ಇಲ್ಲಿಯ ನಿವಾಸಿಗಳು ಒಂದು ದೊಡ್ಡ ಸಭೆ ಸೇರಿ ಕೂಲಂಕುಷ ವಿಚಾರಿಸಿ ನೋಟೀಸು ಕೊಟ್ಟು ಅವರಿಂದ ಹೇಳಿಕೆ ತೆಗೊಂಡು ತೀರ್ಮಾನಿಸಿ ಜಾಹೀರು ಪ್ರಕಟಣೆ ಹೊರಡಿಸಿದರು. ಅದರ ಪ್ರತಿ ಕೆಳಗೆ ಕನ್ನಡ ಭಾಷೆಯಲ್ಲಿ ಕೊಟ್ಟಿದೆ." (ವೈದಿಕ ಸಂಪತ್ತಿ)

## ಜಾಹೀರು ಪ್ರಕಟಣೆ

**ಆಫ್ರಿಕಾ ಖಂಡದ ಈಜಿಪ್ತ ದೇಶದಿಂದ ಬಂದಿರುವ ಈಜಿಪ್ತವಾನ, ಜಿಪ್ತವಾನ, ಚಿಪ್ತವಾನ, ಚಿತ್ಪಾವನ, ಎಂಬ ಜಾತಿಯವರ ನಿರ್ಣಯ—ಚಿತ್ತಪಾವನ ಜಾತೀಯರ ವಿಷಯವಾಗಿ ನಡೆದಿರುವ ರಿಕಾರ್ಡುಗಳನ್ನು ಸಾದ್ಯಂತವಾಗಿ ಸಭೆಯವರು ವಿಮರ್ಶೆ ಮಾಡಿ ನೋಡಿದ್ದಾಯಿತು. ಮತ್ತು ಪ್ರತಿಯೊಂದು ವಿಷಯದ ಮೇಲೂ ವಿಚಾರ ಮಾಡಿ ಸಭೆಯವರು ಪಟ್ಟಿರುವ ಅಭಿಪ್ರಾಯವು ನಮಗೆ ಸಲ್ಲಿಸಲ್ಪಟ್ಟಿದೆ. ಇವುಗಳನ್ನೆ ಪರ್ಯಾಲೋಚಿಸಲು ಚಿತ್ತಪಾವನ ಜಾತಿಯು ಭಾರತ ಖಂಡದ್ದು ಅಲ್ಲ. ಆಫ್ರಿಕಾ**

ಖಂಡದ್ದು ಎಂದು ನಿರ್ಣಯವಾಗುತ್ತದೆ. ಮತ್ತು ಅವರ ಜಾತಿಯವರಾದ ಸಂಶೋಧಕರು ಒಪ್ಪಿರುವಂತೆ ಈ ಸಭೆಯವರಿಗೂ ನಿಜವಾಗಿ ಕಂಡುಬಂದದ್ದರಿಂದ ಭರತಖಂಡದ ಬ್ರಾಹ್ಮಣರಲ್ಲವೆಂದು ನಿರ್ಣಯವಾಗಿರುತ್ತದೆ. ಆಫ್ರಿಕಾದವರ ಸಂಸರ್ಗದಲ್ಲಿ ಭರತಖಂಡದ ದಶವಿಧ ಬ್ರಾಹ್ಮಣರು ಸೇರದೇ ಇರುವುದು ಸದಾಚಾರಕ್ಕೆ ಯೋಗ್ಯವಾಗಿದೆ. ಈ ಚಿತ್ತಪಾವನ ಜಾತಿ ವಿಷಯವಾಗಿ ಇಷ್ಟು ಖಂಡಿತವಾದ ನಿರ್ಣಯವು ಈ ವರೆಗೂ ಯಾರಿಂದಲೂ ಮಾಡಲ್ಪಟ್ಟಿರುವುದಿಲ್ಲ. ಚಿತ್ತಪಾವನರಿಂದ ಈ ಸಭೆಗೆ ಬಂದಿರುವ ಜವಾಬುಗಳಲ್ಲಿ ನಿರಾಧಾರವಾಗಿಯೇ ಪಟ್ಟಿರುತ್ತದೆ. ಆಧಾರವೂ ಇಲ್ಲದೆ ಹೋದರೆ ಎಲ್ಲಾ ಬ್ರಾಹ್ಮಣರ ಸಮ್ಮತಿಯನ್ನು ಇನ್ನಾದರೂ ಕಳುಹಿಸಿಕೊಡಬೇಕೆಂದು ಸಭೆಯಿಂದ ಕೇಳಲ್ಪಟ್ಟಿತು. ಅದರಂತೆ ಸಮ್ಮತಿಯನ್ನು ವ ಆಧಾರವನ್ನು ಸುದ್ಧಾ ಕಳುಹಿಸಲಿಲ್ಲ. ಆದುದರಿಂದ ಸಭೆಯವರು ವಿಚಾರಮಾಡಿ ಚಿತ್ತಪಾವನ ಜಾತಿಯು ಆಫ್ರಿಕಾಖಂಡ ಮುನ್ನಾದ ದ್ವೀಪಾಂತರಗಳಿಂದ ಬಂದದ್ದೆಂದು ನಿರ್ಣಯಿಸಲ್ಪಟ್ಟಿತು. ಚಿತ್ತಪಾವನರು ಭರತಖಂಡದ ಬ್ರಾಹ್ಮಣರೊಡನೆ ಸೇರಬೇಕೆಂದು ಅಸತ್ಯಸಾಧನೆ ಮಾಡುತ್ತಾರೆ. ಆದಕಾರಣ ಭರತಖಂಡದ ಬ್ರಾಹ್ಮಣಾದಿ ಚತುರ್ವರ್ಣದವರು ಇಂಥಾ ಅಸತ್ಯಕ್ಕೆ ಅವಕಾಶ ಉಂಟಾಗದಂತೆ ದಕ್ಷತೆಯಿಂದ ಸತ್ಯ ಸಾಧನವನ್ನು ಮಾಡಬೇಕಾಗಿರುತ್ತದೆ.

### "ಸತ್ಯಮೇವ ಜಯತೆ ನಾನೃತಂ"

[ಆದುದರಿಂದ ನಾನು ಹೇಳುವುದೇನಂದರೆ ಶಾಸ್ತ್ರಗಳು ಗುರುರಾಜ ಭಟ್ಟರು ತಿಳಕೊಂಡಷ್ಟು ಸುಲಭವಾಗಿ ಹಾರಿಸಲ್ಪಡಲು ಸಾಧ್ಯವಾಗಲಾರದು. ನಮ್ಮ ಪೂರ್ವಜರೂ ಸಹ ಭಟ್ಟರು ತಿಳಿದಂತೆ ಹೀನಮಾತು ಆಡುವವರೂ ಅಲ್ಲ. ಶಾಸ್ತ್ರಗಳ ವಾಕ್ಯಕ್ಕೆ ಪ್ರಾಚೀನರ ಮಾತಿಗೆ ಅರ್ಥವಿದೆ. ಅದನ್ನು ತಿಳಿದುಕೊಳ್ಳಲು ಪ್ರಯತ್ನ ಮಾಡಬೇಕು. ತನ್ನ ಬುದ್ಧಿಗೆ ಹೊಳೆಯಲಿಲ್ಲವೆಂದು ತೆಗಳಬಾರದು. "ಆಚಾರ್ಯವಾನ್ ಪುರುಷೋವೇದ" ಗುರುಗಳ ಉಪದೇಶದಿಂದ ಗುರೂಪಸತ್ತಿಯಿಂದ ಅರ್ಥ ತಿಳಿದುಕೊಳ್ಳಲು ಯತ್ನಿಸಬೇಕು. "ವ್ಯಾಖ್ಯಾನತೊ ವಿಶೇಷಪ್ರತಿಪತ್ತಿಃ ನಹಿ ಸಂದೇಹಾದಲಕ್ಷಣಂ" ಗುರುಗಳ ವ್ಯಾಖ್ಯಾನದಿಂದ ನಮಗೆ ಹೊಳೆಯದ ಶಾಸ್ತ್ರಾರ್ಥ ವಿಶೇಷವು ತಿಳಿಯುತ್ತದೆ. ನಮ್ಮ ಬುದ್ಧಿಗೆ ಅರ್ಥ ಹೊಳೆದಿಲ್ಲ, ತಿಳಿಯಲಿಲ್ಲವೆಂದು ಶಾಸ್ತ್ರ ಅಪ್ರಮಾಣವಾಗಲಾರದು, ತಪ್ಪು ಆಗಲಾರದು. ನಮ್ಮ ಪೂರ್ವಜರು *M.A., Phd.* ಹಾಗೂ ಇತರ ಪದವೀಧರರು ಆಗಿರಲಿಕ್ಕಿಲ್ಲ. ಆದರೆ ನಮ್ಮಿಂದ ಹೆಚ್ಚು ತಿಳುವಳಿಕೆ ಹೆಚ್ಚು ಇತಿಹಾಸ ಬಲ್ಲವರಾಗಿದ್ದರು ಎಂಬುದರಲ್ಲಿ ಸಂಶಯವಿಲ್ಲ. ಆದುದರಿಂದ ಬಹು ವಿಚಾರಮಾಡಿ ಅತಿ ಜಾಗ್ರತೆಯಿಂದ ನಿಂದಿಸಲು ಉಪಕ್ರಮಿಸಬೇಕು. ಇಲ್ಲದಿದ್ದರೆ ನಮಗೇನೇ ಅಪಮಾನಕಾದಿರುತ್ತದೆ. ಅಂತೂ ಚಿತ್ತಪಾವನರ ಕುರಿತು ದೇಶದಲ್ಲೆಲ್ಲಾ ಬಹಳ ಜಟಿಲ ಸಮಸ್ಯೆ ಇದೆಯೆಂದು ದಾಖಲೆಗಳಿಂದ ಸಿದ್ಧವಾಗಿದೆ. ಭಟ್ಟರು ತಿಳಿದಷ್ಟು ಸರಳವಿಲ್ಲವೆಂದಾಯಿತು]

## ಗೌಡಸಾರಸ್ವತರು

ಸರಸ್ವತೀ ನದೀತೀರದಲ್ಲಿದ್ದ ಪ್ರಯುಕ್ತ ಸಾರಸ್ವತರೆಂಬ ಜನರ ಒಂದು ಶಾಖೆಯು ಪೂರ್ವಕ್ಕೆ ಸರಿದು ಹೋಗಿ ಗೌಡ (ಬಂಗಾಳ) ದೇಶದಲ್ಲಿ ಕೆಲಕಾಲ ನೆಲಸಿ ಗೋಮಾಂಚಲಕ್ಕೆ ಬಂದಿರುವುದರಿಂದ ಗೌಡಸಾರಸ್ವತರೆಂದು ಕರೆಯಲ್ಪಟ್ಟರು. ಅರ್ಥಾತ್ ಗೌಡ ದೇಶಕ್ಕೆ ಹೋಗದೆ ನೇರ ಗೋಮಾಂತಕ್ಕೆನೇ ಬಂದುದರಿಂದ ಕೆಲವರು ಸಾರಸ್ವತ ರೆಂದೆನಿಸಿಕೊಂಡರೆಂದಾಯಿತು. ಈ ಎರಡು ಶಾಖೆಯ ಮೂಲ ಹುಟ್ಟು ಒಂದೇ ಎಂದು ಶ್ರೀ ಗೋವಿಂದ ಪೈಗಳ ಸಮ್ಮತಿ ಪ್ರಕಾರ ಭಟ್ಟರು ಬರೆಯುತ್ತಾರೆ. ಆದರೆ "ಅವರ ಮೂಲಕ್ಕೂ ಪರಶುರಾಮನಿಗೂ ಏನೇನೂ ಸಂಬಂಧ ಇರುವುದಿಲ್ಲ"ವೆಂದು ಭಟ್ಟರು ಬರೆಯುವುದು ಮಾತ್ರ ಸರಿಯಲ್ಲ.

ಪಶ್ಚಾತ್ ಪರಶುರಾಮೇಣ ಹ್ಯಾನೀತಾ ಮುನಯೋ ದಶ |
ತ್ರಿಹೋತ್ರವಾಸಿನಶ್ಚೈವ ಪಂಚಗೌಡಾಂತರಾ ಸ್ತಥಾ ||

ಎಂಬ ಶ್ಲೋಕದಲ್ಲಿ "ಶೂದ್ರರನ್ನಾಗಿ ಮಾಡುವ ಹವ್ಯಾಸ ಪಡಬೇಡ" ಎಂದೂ, "ಶಿಷ್ಟಬ್ರಾಹ್ಮಣರು ಬರುತ್ತಿದ್ದು ಅವರಿಂದಲೇ ಯಜ್ಞಯಾಗಾದಿಗಳನ್ನು ಮಾಡುವವನಾಗು" ಎಂದೂ, ಆಕಾಶವಾಣಿ ಆದ ಮೇಲೆ ಶ್ರೀಪರಶುರಾಮನು ಅದನ್ನು ಕೇಳಿ ತ್ರಿಹೋತ್ರದಿಂದ ಬಂದಿರುವ ಪಂಚಗೌಡಾಂತರ್ಗತ ಹತ್ತು ಕುಲದ ಮೂರು ಗೋತ್ರದ ಬ್ರಾಹ್ಮಣರನ್ನು ಕರೆಯಿಸಿ ನೆಲೆಸಿದನು ಎಂಬುದಾಗಿ ಹೇಳಿಯದೆ. ಇದು ಸುಳ್ಳು ಆದೀತೇ? ಭಟ್ಟರು ಸ್ವತಃ ತಾನು ಆ ಕಾಲದಲ್ಲಿ ಇರಲಿಲ್ಲ ಮತ್ತು ನೋಡಲಿಲ್ಲ, ಹಾಗೆ ನೋಡಿ ಯಾರಾದರೂ ಬರೆದಿದ್ದರೆ ಅದನ್ನು ಉದಾಹರಿಸಲಿಲ್ಲ. ಬೇರೆ ಯಾವ ಕಾರಣವನ್ನೂ ತೋರಿಸಲಿಲ್ಲ. ತಾನು ಬೇಡವೆಂದರೆ ಮತ್ತು ಹಾಗೆ ಬಯಸಿದರೆ, ವಸ್ತುಸ್ಥಿತಿ ಬರಲಾದೀತೇ? ಪ್ರಾಚೀನ ಕಾಲದಲ್ಲಿ ನೋಡಿ ತಿಳಿದು ಬರೆದಿಟ್ಟ ವಸ್ತುಸ್ಥಿತಿಯನ್ನು ಇದೀಗ ನಿಷ್ಕಾರಣ ಅಲ್ಲಗಳೆಯಲು ತಮಗೆ ಹಕ್ಕಿದೆಯೆಂಬಂತೆ ಇಂಥಾ ಇತಿಹಾಸಕಾರರು ವರ್ಣಿಸುತ್ತಾರೆ. ಇದನ್ನು ನಾವು ಮನ್ನಿಸಲಾರೆವು. ಸರಿಯಾದ ಕಾರಣ ಕೊಟ್ಟು ಅಲ್ಲಗಳೆಯಬೇಕು. ಆದುದರಿಂದ ಹಿಂದಿನ ದಾಖಲೆಯಂತೆ ಗೌಡಸಾರಸ್ವತರಿಗೂ ಪರಶುರಾಮನಿಗೂ ಎಲ್ಲಾ ತರದ ಸಂಬಂಧವಿದೆ. ಅದನ್ನು ಅಲ್ಲಗಳೆಯಲು ಭಟ್ಟರಿಗೆ ಅಧಿಕಾರವಿಲ್ಲ. ಹೀಗೆ ಪರಶುರಾಮನಿಂದ ಮನ್ನಣೆ ಪಡೆದಿರುವ ಮೂರು ಗೋತ್ರದ ದಶಕುಲದ ಗೌಡಸಾರಸ್ವತರು ಕುಶಸ್ಥಲೀ ಕರ್ದಲೀ ಎಂಬಲ್ಲಿ ಇರುತಿದ್ದರೆಂದೂ, ಕೌತ್ಸ, ವತ್ಸ, ಕೌಂಡಿನ್ಯಗೋತ್ರದವರೆಂದೂ, ಈ ದಶಕುಲದ ವಿಪ್ರರು ಶ್ರೇಷ್ಠರೂ, ರಾಜಪೂಜಿತರೂ, ಸದಾಚಾರನಿರತರೂ, ಶ್ರೌತಸ್ಮಾರ್ತ ಕರ್ಮದಲ್ಲಿ ದಕ್ಷರೆಂದೂ, ಕೆಳಗೆ ಉದಾಹರಿಸುವ ಮುದ್ರಿತ ಸಹ್ಯಾದ್ರಿ ಉತ್ತರಖಂಡದಿಂದ ತಿಳಿಯುತ್ತದೆ.

"ಕುಶಸ್ಥಲ್ಯಾಂಚ ಕರ್ದಲ್ಯಾಂ ತ್ರಿಗೋತ್ರಂ ಸ್ಥಾಪಿತಂ ಖಲು |
ಕೌತ್ಸಂ ವತ್ಸಂ ಚ ಕೌಂಡಿನ್ಯಂ ಗೋತ್ರಂ ದಶಕುಲಾನ್ವಿತಂ ||

ಏತೇ ತ್ರಿಗೋತ್ರಜಾಃ ವಿಪ್ರಾಃ ಉತ್ತಮಾಃ ರಾಜಪೂಜಿತಾಃ |
ಸುದರ್ಶನಾಃ ಸದಾಚಾರಾಃ ಚತುರಾಃ ಸರ್ವಕರ್ಮಸು ||

ಮತ್ತು ಈ ಗೌಡಸಾರಸ್ವತರಲ್ಲಿ ಕೆಲವರು ವೈಷ್ಣವರು ಮತ್ತು ಕೆಲವರು ಶೈವರೂ ಶಾಕ್ತರೂ ವಗೈರೆ ಮೊದಲಿನಿಂದಲೇ ಆಗಿದ್ದರೆಂದು ಮುಂದಿನ ಶ್ಲೋಕದಿಂದ ತಿಳಿಯುತ್ತದೆ.

ಕೇಚಿತ್ತು ವೈಷ್ಣವಾ ಭಕ್ತಾ ಶಿವಭಕ್ತಾಶ್ಚ ಕೇಚನ |
ಪಾಖಂಡಾ ವಿವಿಧಾ ಭಕ್ತಾಃ ಸೌರಾಗಾಣಪತಾಸ್ತಥಾ ||

ಆದುವರಿಂದ "ಇವರು ಮೊದಲು ಶೈವಶಾಕ್ತರಾಗಿದ್ದು ಶ್ರೀಮಧ್ವಾಚಾರ್ಯರ ನಂತರ ವೈಷ್ಣವರಾದರು" ಎಂಬುದೊಂದು ಇತಿಹಾಸಕಾರರ ಕಲ್ಪನೆ ಮಾತ್ರ. ಸ್ವಾಭಾವಿಕ ವೈಷ್ಣವರೇ ಅಜ್ಞಾನದ ಮುಸುಕಿನೊಳಗಿದ್ದವರು ಮಹಾತ್ಮರ ಅನುಗ್ರಹದಿಂದ ಪ್ರಕಟ ವೈಷ್ಣವರಾಗುತ್ತಾರೆ. ಶ್ರೀಮಧ್ವಾಚಾರ್ಯರ ನಂತರ ಸಹ ಗೋಮಾಂತಕರಲ್ಲಿ ಅದೆಷ್ಟೋ ಜನ ಸ್ಮಾರ್ತರು ಉಳಿದಿಲ್ಲವೇ? ಅವರು ಏಕೆ ವೈಷ್ಣವರಾಗಲಿಲ್ಲ? ಅವರು ಎಂದೂ ವೈಷ್ಣವರಾಗುವವರಲ್ಲ. "ವಸಂತಸಮಯೇ ಪ್ರಾಪ್ತೇ ಕಾಕಃ ಕಾಕಃ ಪಿಕಃ ಪಿಕಃ" ಅಂದರೆ ಮೊದಲು ರೂಪ ಆಕಾರಗಳಿಂದ ಒಂದೇ ತರದ ಕಾಗೆಮರಿಗಳೂ, ಕೋಗಿಲೆ ಮರಿಗಳೂ ವಸಂತಸಮಯ ಬಂದಾಗ ಸ್ವರಭೇದದಿಂದ ಇದು ಕಾಗೆ ಮರಿ, ಇದು ಕೋಗಿಲೆ ಮರಿ ಎಂಬುದಾಗಿ ತಿಳಿಯಬಹುದಾಗುತ್ತದೆ. ಕಾಗೆ ಮರಿ ಎಂದಿಗೂ ಕೋಗಿಲೆ ಮರಿ ಆಗಲಾರದು ಎಂದು ಒಬ್ಬ ಕವಿಯು ಉದ್ಗಾರ ತೆಗೆದಿರುವನು. ಅದರಂತೇನೇ ಸ್ವಭಾವ ಶೈವರು ಎಂದೂ ವೈಷ್ಣವರಾಗಲಾರರು. (ಈ ದೃಷ್ಟಾಂತದಿಂದ ಸ್ವಭಾವಕ್ಕೆ ಬದಲಾವಣೆ ಇರುವುದಿಲ್ಲ ಎಂದಷ್ಟೇ ತಿಳಿಯಬೇಕಲ್ಲದೆ ಬೇರೆ ಯಾವ ಅಪಾರ್ಥವನ್ನೂ ಮಾಡಿಕೊಳ್ಳಬಾರದು). ಆದುದರಿಂದ ಮೊದಲಿನಿಂದಲೂ ಗೌಡ ಸಾರಸ್ವತರಲ್ಲಿ ಶೈವ-ವೈಷ್ಣವ ಭೇದಗಳಿತ್ತು. ಅನಂತರದ್ದಲ್ಲ. ಈ ದಶಕುಲದ ಗೌಡಸಾರಸ್ವತರಲ್ಲದೆ ಸಹ್ಯಾದ್ರಿ ಉತ್ತರ ಖಂಡದಲ್ಲಿ ಇನ್ನು ಬೇರೆ 66 ಕುಲ ಸಾಸಷ್ಟಿ ಎಂಬುದಾಗಿ ಪ್ರತಿಪಾದಿಸಿದ್ದು ಕಾಣುತ್ತದೆ.

ಲೋಟಲ್ಯಾಂ ಚ ಕುಶಸ್ಥಲ್ಯಾಂ ವರೇಣ್ಯೇ ಮಠಗ್ರಾಮಕೇ |
ಷಟ್ ಷಟ್ ಏತೇಷು ಗ್ರಾಮೇಷು ಕುಲಾನಿ ಸ್ಥಾಪಿತಾನಿ ವೈ ||
ಚೂಡಾಮಣಿ ಮಹಾಕ್ಷೇತ್ರೆ ಕುಲಾನಿ ದಶ ಏವ ಚ |
ದೀಪಾವಲ್ಯಾಂ ಅಷ್ಟಕುಲಂ ಸ್ಥಾಪಿತಂ ಚ ಯಥಾವಿಧಿ ||
ಗೋಮಾಂಚಲೇ ಮಧ್ಯಭಾಗೇ ಕೈವರ್ತಸ್ಯೈವ ಜಾತಿಕಾಃ |
ಸ್ಥಾಪಿತಾಃ ದ್ವಾದಶಾಃ ವಿಪ್ರಾಃ ಪಂಚಕ್ರೋಶೇಷು ಮಧ್ಯತಃ ||
ಕುಲಂ ದ್ವಾದಶಕಂ ಪುತ್ರ ಸ್ಥಾಪಿತಂ ದ್ವಾದಶೀ ಪುರೇ ||

ಲೋಟಲೀಯಲ್ಲಿ 6 ಕುಲ, ಕುಶಸ್ಥಲೀಯಲ್ಲಿ 6 ಕುಲ, ವರೇಣ್ಯದಲ್ಲಿ 6 ಕುಲ, ಮಠಗ್ರಾಮದಲ್ಲಿ 6 ಕುಲ ಹೀಗೆ 24 ಕುಲಗಳಾದವು. ಚೂಡಾಮಣಿಯಲ್ಲಿ 10 ಕುಲ, ದೀಪಾವಲಿಯಲ್ಲಿ 8 ಕುಲ, ಹೀಗೆ ಒಟ್ಟು 40 ಕುಲಗಳು. ಇದುಮಾತ್ರವಲ್ಲದೆ ಗೋವೆಯ ಪಂಚಕ್ರೋಶ ಮಧ್ಯಭಾಗದಲ್ಲಿ ಅಂಬಿಗರ ಜಾತಿಯ ಬ್ರಾಮ್ಹಣರ 12 ಕುಲಗಳು ಸ್ಥಾಪಿತವಾದವು. ಮತ್ತು ದ್ವಾದಶಪುರದಲ್ಲಿ ಬೇರೆ 12 ಕುಲಗಳು ಸ್ಥಾಪಿಸಲ್ಪಟ್ಟವು. ಹೀಗೆಲ್ಲಾ 66 ಕುಲಗಳಾದವು. ಈ ಸಾಸಷ್ಟ ಕುಲಗಳು ತ್ರಿಹೋತ್ರದಿಂದಲೇ ಬಂದದ್ದೆಂದು ನಿಶ್ಚಯಾತ್ಮಕ ಹೇಳಬರುವುದಿಲ್ಲ. ಏಕೆಂದರೆ, ಕೈವರ್ತ ಜಾತಿಯವರಾದ ಪರಶುರಾಮನಿಂದ ನಿರ್ಮಿತರು ಇದರಲ್ಲಿ ಗಣನೆಯಾಗುತ್ತಾರೆ. ಅವರು ತ್ರಿಹೋತ್ರದಲ್ಲಿರಲಿಲ್ಲವಷ್ಟೇ? ಆದರೆ, "ದಶಗೋತ್ರಕರಾ ವಿಪ್ರಾಃ ತ್ರಿಹೋತ್ರಪುರವಾಸಿನಃ" ಎಂಬ ಶ್ಲೋಕದಲ್ಲಿ ತ್ರಿಹೋತ್ರ ಎಂಬುದೊಂದು ಶಹರವೆಂತಲೂ, ಮೂರು ಗೋತ್ರದವರು ಮಾತ್ರವಲ್ಲ, ದಶಗೋತ್ರದವರೂ ತ್ರಿಹೋತ್ರದಿಂದಲೇ ಬಂದವರೆಂತಲೂ ಅರ್ಥವಾಗುತ್ತದೆಯಾದುದರಿಂದ ಇವರೂ ಗೌಡಸಾರಸ್ವತರಾಗಬಹುದು. ಪಂಚಕ್ರೋಶ ಮಧ್ಯದ ಕೈವರ್ತ ಜಾತಿಯ ವಿಪ್ರರು ಮಾತ್ರ ಗೌಡಸಾರಸ್ವತರಾಗುವುದಿಲ್ಲ. ಸಾರಸ್ವತರಾಗುವುದೂ ಇಲ್ಲ. ಅವರಂತೂ ಇಲ್ಲಿಯೇ ಇದ್ದು ಬ್ರಾಮ್ಹಣರಾದವರು. ಇವರನ್ನೇ ಕುರಿತು ಭಟ್ಟರು ಉತ್ತರ ಸಹ್ಯಾದ್ರಿಖಂಡದ ಕೊಂಕಣೋತ್ಪತ್ತಿ ಅಧ್ಯಾಯದ ಭಾಷಾಂತರವೆಂದು ತು. ಪು. 159ರಲ್ಲಿ ಬರೆದು ಶೀವಳ್ಳಿಯವರನ್ನು ತಮಾಷೆ ಮಾಡಲೆತ್ನಿಸಿರುವುದು. ಇವರು ಕೊಂಕಣ ದೇಶದಲ್ಲಿ ಮೊದಲಿನಿಂದಲೂ ಇರುತ್ತಿದ್ದುದರಿಂದ ಕೊಂಕಣಿಗರು ಹೌದು. ಇನ್ನಿತರರೂ ಕೊಂಕಣಿಗರು ಹೌದು. ಕೊಂಕಣಿಶಬ್ದ ವ್ಯಾಪಕ, ಗೌಡಸಾರಸ್ವತ, ಸಾರಸ್ವತ ಶಬ್ದ ಕೆಲವೊಂದು ಪಂಗಡಗಳನ್ನು ಮಾತ್ರ ತಿಳಿಸುತ್ತದೆ. ಆದುದರಿಂದ ಅವೆರಡು ಶಬ್ದಗಳೂ ಪರ್ಯಾಯ ಪದಗಳು ಎಂದು ತಿಳಿಯಬಾರದು. ಗೌಡಸಾರಸ್ವತರು ಶೂದ್ರರಲ್ಲ. ಕೊಂಕಣರು ಶೂದ್ರರೂ ಇರಬಹುದು. ಈ ವಿವೇಚನೆ ಮಾಡದೆ ಭಟ್ಟರು ಕೆಲವೊಂದು ತಪ್ಪು ಮಾಡಿರುತ್ತಾರೆ. ಮುದ್ರಿತ ಸಹ್ಯಾದ್ರಿ ಪುಸ್ತಕದಲ್ಲಿ "ಕೈವರ್ತಸ್ಯೈವ ಜಾತಿಕಾಃ ವಿಪ್ರಾಃ" ಎಂದಿದ್ದರೆ ಭಟ್ಟರು ನೋಡಿದ ಸಹ್ಯಾದ್ರಿ ಪುಸ್ತಕದಲ್ಲಿ ಅದರ ವಿವರಣ ಸಹಿತ ಉಕ್ತವಾಗಿದೆ. ಪ್ರಮೇಯದಲ್ಲಿ ವ್ಯತ್ಯಾಸವಿರುವುದಿಲ್ಲ. ಅಂತೂ ಮುದ್ರಿತ, ಬರೆದ, ಎಲ್ಲಾ ಸಹ್ಯಾದ್ರಿ ಉತ್ತರ ಖಂಡದಲ್ಲಿ ಕೈವರ್ತಜಾತಿಯ ವಿಪ್ರರಾಗಲೀ, ಶೂದ್ರ ಬ್ರಾಮ್ಹಣರಾಗಲಿ ಬರೆಯಲ್ಪಟ್ಟಿದ್ದಾರೆ ಎಂದು ಸಿದ್ಧವಾಯಿತು. ಆ ಶೂದ್ರ ಬ್ರಾಮ್ಹಣರೇ ಗೌಡಸಾರಸ್ವತರೆಂಬುದಾಗಿ ಬರೆದದೆ ಎಂಬುದು ಭಟ್ಟರಿಗೆ ಕೇವಲ ಭ್ರಮೆ. ಮತ್ತು ಮುದ್ರಿತ ವಿವಿಧ ಬ್ರಾಮ್ಹಣೋತ್ಪತ್ತಿ ಅಧ್ಯಾಯದಲ್ಲಿ ಅನುಲೋಮ ಮತ್ತು ಪ್ರತಿಲೋಮ ಜಾತಿಗಳನ್ನು ಹೇಳಿದ್ದು ಮಾತ್ರವಲ್ಲದೆ ರಂಡಗೋಳಕ, ಕುಂಡಗೋಳಕ ಮೊದಲಾದ ಸಂಕರ ಜಾತಿಗಳನ್ನು ನಿರೂಪಿಸಿ ಕೊನೆಗೆ 39ನೇ ಶ್ಲೋಕದಲ್ಲಿ ಇವರೆಲ್ಲಾ ಕೊಂಕಣದ ವಿಪ್ರರು ಎಂದು ಘಂಟಾಘೋಷವಾಗಿ ಜಾಹೀರು ಪ್ರಕಟಣೆ ಮಾಡಿದೆ. "ತೇವೈ ಕೊಂಕಣಜಾ ವಿಪ್ರಾಃ

ಕಥಿತಾ ಸರ್ವ ಏವಹಿ". ಇವರೆಲ್ಲರೂ ಗೌಡಸಾರಸ್ವತರೇ? ಅಲ್ಲ. ಇವರು ಕೊಂಕಣರು ಹೌದು. ಅತ ಏವ ಗೌಡಸಾರಸ್ವತರನ್ನು ಕೊಂಕಣಿಗರೆಂದರೆ ಅವರಿಗೆ ಅಪಮಾನ ವಾಗುತ್ತದೆ. ಭಟ್ಟರಿಗೆ ಇದು ತಿಳಿಯದು. ಆದುದರಿಂದಲೇ ಗೌಡಸಾರಸ್ವತರನ್ನು ಕೊಂಕಣರೆಂದು ಕರೆಯುವುದರಲ್ಲಿ ನಿಜವಾಗಿ ತಪ್ಪಿಲ್ಲ. ಅಪಹಾಸವೂ ಇಲ್ಲ, ಎನ್ನು ತ್ತಾರೆ. ಜಾತಿನಿರ್ಣಯವೆಂಬ ಗ್ರಂಥದಲ್ಲಿ ಡಾಕ್ಟರ್ ವಿಲ್ಸನ್ ಸಾಹೇಬರು ತೋರಿಸಿದ 32 ಮಹಾರಾಷ್ಟ್ರದ ಬ್ರಾಮ್ಹಣರು ಎಂದು ಬರೆದದ್ದನ್ನು ಅನುವಾದ ಮಾಡಿ ಅಕಾ ರಾದಿ ಕ್ರಮದಿಂದ ಪ್ರಪ್ರತ್ಯೇಕ ಬರೆದು ತೋರಿಸಿ ಇದೆಲ್ಲಾ ದಕ್ಷಿಣದ ಬ್ರಾಮ್ಹಣರ ಉಪ ಜಾತಿಗಳು ಎಂದು ಬರೆದದೆ. ಈ ಸಂಕೀರ್ಣ ಪರಿಶುದ್ಧ ಜಾತಿಗಳನ್ನು ಬೇರೆ ಬೇರೆ ಎಂದು ವಿವೇಚಿಸಿ ತಿಳಿಯದೆ ದೇಶದಲ್ಲಿ ಅನೇಕ ಕಡೆ ಪ್ರತಿಕ್ರಿಯೆಗಳು ಉಂಟಾಗಿವೆ. ಸನ್ 1647ರಲ್ಲಿ ನಗರ ರಾಜಧಾನಿಯಲ್ಲಿ ಕೆಳದಿ ನಾಯಕರು ಆಳಿಕೊಂಡು ಇರು ತ್ತಿದ್ದಾಗ ಗೌಡಸಾರಸ್ವತರು ಬ್ರಾಮ್ಹಣರಲ್ಲ, ಮಾಡಬಾರದ ಬ್ರಮ್ಹಕರ್ಮ ಮಾಡು ತ್ತಾರೆ, ಎಂದು ದಂಡ ಮಾತ್ರವಲ್ಲದೆ, ಬ್ರಮ್ಹಕರ್ಮ ಮಾಡಬಾರದೆಂದು ವಿಧಿಸಿದ್ದನು. (ಅದು ತುಳುವರ ಪ್ರಚೋದನೆಯಲ್ಲವೆಂದು ಭಟ್ಟರು ತಿಳಿದಿರಲಿ.) ಮತ್ತು 1867ರಲ್ಲಿ ಮೈಸೂರು ಸಂಸ್ಥಾನದ ನಗರ ಪೇಟೆಯಲ್ಲಿ ಕಾಶೀ ಮಠದ ಶ್ರೀಪಾದಂಗಳವರು ಬಿರು ದಾವಳಿಯಿಂದ ಬರುತ್ತಿರುವಾಗ ತಡೆಯಲ್ಪಟ್ಟಿತು ಎಂದು ಮುಂತಾದಾಗಿ "ಕಾಶೀ ಮಠದ ಸಂಕ್ಷಿಪ್ತ ಚರಿತ್ರೆ" ಎಂಬ ಪುಸ್ತಕದಲ್ಲಿ ಕಾಣಬಹುದು.

ಜಾತಿನಿರ್ಣಯ ಗ್ರಂಥದಲ್ಲಿ "ಶೇಣವಿ 301ನೇ ಜಾತಿಯ ಕುರಿತು ದಕ್ಷಿಣ ದೇಶದಲ್ಲಿ ದೊಡ್ಡ ವಿವಾದವಿದೆ. ಅರ್ಥಾತ್ ನನ್ನ ಕಡೆ ಎರಡು ವಿಧವಾದ ಪ್ರಮಾಣ ದೊರಕಿದೆ. ಪಂಡಿತ ಪಾಂಡೋಬಾ ಗೋಪಾಲ ಎಂಬವರು ಇವರ ವಿಷಯದಲ್ಲಿ ಉದಾಹರಿಸಿದ—

ಸೂರ್ಯವಂಶೀಯಕ್ಷತ್ರಶ್ಚ ಪಿತಾ ಭ ವತಿ ಯೋ ನರಃ |
ಮಾತಾ ಯ ಬ್ರಾಮ್ಹಣೀ ನಾರೀ ಶೇಣವೀ ಜಾತಿರುಚ್ಯತೇ ||

ಎಂಬ ಸ್ಕಾಂದಪುರಾಣದ ಶ್ಲೋಕಾಧಾರದಿಂದ ಹೀಗೆ ಬರೆಯುತ್ತಾನಲ್ಲ? ಕರ್ಣಾಟಕ ದೇಶದಲ್ಲಿ ಮುನ್ನೂರು ವರ್ಷದ ಹಿಂದೆ ರಾಮರಾಯನೆಂಬ ರಾಜನಿದ್ದನು. ಆ ಸಮಯದಲ್ಲಿ ಒಬ್ಬ ಶೇಣವೀ ಬ್ರಾಮ್ಹಣನು ಸನ್ಯಾಸ ತೆಗೊಂಡನು. ಅದರ ಚರ್ಚೆ ಪ್ರಾರಂಭವಾಗಿ ರಾಜನ ಕಡೆಗೆ ಹೋಯಿತು. ಶೇಣವೀಯರಿಗೆ ಸನ್ಯಾಸ ತೆಗೊಳ್ಳಲು ಅಧಿಕಾರವಿಲ್ಲವೆಂದು ತೀರ್ಮಾನವಾಯಿತು. ರಾಜನು ದಂಡ ವಿಧಿಸಿ ಸನ್ಯಾಸ ಬಿಡಿ ಸಿದನು. ಏಕೆಂದರೆ ಸನ್ಯಾಸಗ್ರಹಣವು ಶುದ್ಧ ಬ್ರಾಮ್ಹಣನಿಗೆ ಮಾತ್ರ ಇರತಕ್ಕದ್ದು. ಮತ್ತು (ಪುಟ 336) ತಲಾಶೆ ಬ್ರಾಮ್ಹಣರ ವಿಚಾರ ನಡೆದಾಗ ಪ್ರಸಂಗವಶಾತ್ ವಿಕ್ರಮಶಕ 1844ನೇ ಶ್ರಾವಣ ಶುಕ್ಲ ಪೌರ್ಣಿಮಾ ಕಾಶಿಯಲ್ಲಿ ಸಮಸ್ತ ಬ್ರಾಮ್ಹಣರ ಸಭೆ ಜರಗಿ ನಿಶ್ಚಯ ಮಾಡಿತ್ತಲ್ಲಾ? ಶೇಣವೀಯರಿಗೆ ಬ್ರಮ್ಹಕರ್ಮ ಅಧಿಕಾರ ಇಲ್ಲ.

ಅವರು ಬ್ರಾಹ್ಮಣರೂ ಅಲ್ಲ. ಯಾವಾಗ "ರಾಮಚಂದ್ರ ಬಾಬಾ ಶೇಣವೀ ಪೇಶ್ವೆ ಮಹಾರಾಜರ ದರ್ಬಾರದಲ್ಲಿ ಸೇರಿದನೊ ಅಲ್ಲಿಂದ ಅವರು ತಮ್ಮನ್ನು ಬ್ರಾಹ್ಮಣ ರೆಂದು ಹೇಳಿಕೊಳ್ಳಲಾರಂಭಿಸಿದರು"—ಹೀಗೆ ಬರೆದಿರುತ್ತಾರೆ.

ಉತ್ತರ ಸಹ್ಯಾದ್ರಿಯಂತೂ ಅವಿವೇಕದಿಂದ ಬರೆಯಲೇ ಇಲ್ಲ. ಅದರಲ್ಲಿ ಪರಿಶುದ್ಧ ಕುಲ 10, ಶೂದ್ರ ಬ್ರಾಹ್ಮಣರ ಕುಲ 12 ಇತರ ಕುಲ 54—ಹೀಗೆ ವಿವಿಚ್ಯ ಹೇಳಿಯದೆ. ಮತ್ತು ಆಕಾಶವಾಣೀ ನುಡಿದಂತೆ ಆ ಶೂದ್ರ ಬ್ರಾಹ್ಮಣರು ಮತ್ತೆ ಪೋರ್ತುಗೀಜರು ಬಂದ ಮೇಲೆ ಮತಾಂತರಗೊಳಿಸಿ ಪುನಶ್ಚ ಶೂದ್ರರೇ ಆದ ಸಂಗತಿ ನಿಜವಿದೆ. ಆದುದರಿಂದ ಉತ್ತರ ಸಹ್ಯಾದ್ರಿಯಲ್ಲಿ ಹೇಳಿದ ಮಾತು ಯಾವದೂ ಸುಳ್ಳಾಗಲಿಲ್ಲ. ಕೊಂಕಣೋ ತ್ಪತ್ತಿ ಅಧ್ಯಾಯವೂ ಸತ್ಯವೇ? ನಂಬಬೇಕಾದುದೇ ಸರಿ. ಅತ ಏವ ಶ್ರೀಮಾನ್ ಗೋವಿಂದ ಪೈಗಳಿಗೆ ಭಟ್ಟರಂತೆ ತಪ್ಪು ಕಲ್ಪನೆಗಳನ್ನು ತಲೆಯಲ್ಲಿ ತುಂಬಿಕೊಳ್ಳದುದ ರಿಂದ ಕೊಂಕಣೋತ್ಪತ್ತಿ ಅಧ್ಯಾಯದ ವಿಷಯಗಳು ಯಥಾಸ್ಥಿತವೆಂದೇ ಗ್ರಹಿಕೆ ಆಗಿದೆ. ಅದನ್ನು ವಿಮರ್ಶೆ ಮಾಡುವ ಅಂದರೆ ತೆಗಳುವ ಅಗತ್ಯ ಉಂಟಾಗಲಿಲ್ಲ. ಸದರಿ ಅಧ್ಯಾಯದಲ್ಲಿ ಗೌಡಸಾರಸ್ವತರ—ಗೋವಿಂದ ಪೈಗಳವರ ಪೂರ್ವಜರ, ಖಂಡನೆ ಆಗಲಿಲ್ಲ–ಆಗುವುದೂ ಇಲ್ಲ. ಆದುದರಿಂದ "ಪಂಚಗೌಡರನ್ನು ಗೋವಾದಲ್ಲಿ ಸ್ಥಾಪಿಸಿದ್ದಕ್ಕೆ ಪಶ್ಚಿಮ ಕರಾವಳಿಯನ್ನು ಸಪ್ತ ಕೊಂಕಣವಾಗಿ ವಿಭಾಗ ಮಾಡಿದ್ದಕ್ಕೆ ಉತ್ತರ ಸಹ್ಯಾದ್ರಿಯನ್ನು ಆಧಾರಗಳಲ್ಲಿ ಒಂದಾಗಿ ಎತ್ತಿ ಹೇಳುತ್ತಾರೆ. ಆದರೆ ಅದೇ ಗ್ರಂಥದಲ್ಲಿ ಕೊಂಕಣೋತ್ಪತ್ತಿ ಅಧ್ಯಾಯದಲ್ಲಿ ಕೊಂಕಣರ (ಗೌಡಸಾರಸ್ವತರ) ಖಂಡನೆಯನ್ನು ಮಾಡಿದ್ದು ಹೇಗೆ ಅವರ ಅವಗಾಹನೆಗೆ ಬರಲಿಲ್ಲವೆಂಬುದು ಆಶ್ಚರ್ಯದ ಸಂಗತಿ ಎಂದು (ತು. ಪುಟ 162ರಲ್ಲಿ) ಬರೆದುದು "ಅಬದ್ಧಂ ಪಠಿತ್ವಾ ಕುಚೋದ್ಯಂ ಕರೋತಿ" ಎಂಬಂತಿದೆ. ಈ ಮೊದಲೇ ನಿರೂಪಿಸಿದಂತೆ ಕೊಂಕಣಶಬ್ದವು ಕೊಂಕಣ ದಲ್ಲಿಯ ಹಲವಾರು ಕುಲಜಾತಿಗಳನ್ನು ತಿಳಿಸುತ್ತದೆ. ಗೌಡಸಾರಸ್ವತ ಶಬ್ದವು ತ್ರಿಹೋತ್ರದಿಂದ ಬಂದವರನ್ನು ಮಾತ್ರ ತಿಳಿಸುತ್ತದೆ. ಈ ಎರಡು ಪದಗಳೂ ಸಮಾ ನಾರ್ಥಕ ಪದಗಳು ಅಲ್ಲ.

ಪರಮಪೂಜ್ಯ ಶ್ರೀ ಮಧ್ವಾಚಾರ್ಯರು ಗೋವೆಗೆ ದಿಗ್ವಿಜಯ ಮಾಡಿದ ವೃತ್ತಾಂತವು ಶ್ರೀಮಧ್ವವಿಜಯದಲ್ಲಿ ಉಕ್ತವಾಗಿದೆ. ಆ ಸಮಯದಲ್ಲಿ ವೈಷ್ಣವರಾದ ಗೌಡಸಾರಸ್ವತರೆಲ್ಲಾ ಮಾಧ್ವದೀಕ್ಷಾವನ್ನು ಪಡೆದರು. ತದನಂತರ ಪಲಿಮಾರು ಮಠದಲ್ಲಿರುವ ಹಳೆದಾಖಲೆಗಳ ಮೇಲಿಂದ ಗೋವೆಯಲ್ಲಿರುವ ಗೌಡಸಾರಸ್ವತರು ಪಲಿ ಮಾರು ಮಠದ ಶಿಷ್ಯಪರಂಪರೆಯಲ್ಲಿದ್ದರು ಎಂದು ತಿಳಿದುಬರುತ್ತದೆ. ಇನ್ನು ತನಕ ಆಷಾಢ ಶುದ್ಧ ಏಕಾದಶೀ ದಿವಸ ಶ್ರೀಕೃಷ್ಣ ಮಠದಲ್ಲಿ ಮುದ್ರಾಧಾರಣೆ ನಡೆಯುವಾಗ ಪಲಿಮಾರು ಶ್ರೀಗಳವರ ಪರ್ಯಾಯ ಸಂದರ್ಭದಲ್ಲಿ ಗೌಡಸಾರಸ್ವತರು ಪರ್ಯಾಯ ಪಲಿಮಾರು ಶ್ರೀಗಳವರಿಂದ ಮುದ್ರಾಧಾರಣ ಮಾಡಿಸಿಕೊಳ್ಳುತ್ತಿರುವುದನ್ನು ನಾವು ಕಾಣುತ್ತೇವೆ. ಪಲಿಮಾರು ಮಠದಿಂದ ಗೌಡಸಾರಸ್ವತರು ತಪ್ತಮುದ್ರಾಧಾರಣ

ಮಾಡುವ ಪದ್ಧತಿ ಇದೆ ಎಂಬುದು ನಿರ್ವಿವಾದ. ಮುಂದೆ ಶ್ರೀರಾಮಚಂದ್ರತೀರ್ಥರ ಕಾಲದಲ್ಲಿ ಗೋವೆ ಪರ್ಯಂತರ ಆಗಾಗ್ಗೆ ಶಿಷ್ಯರಿದ್ದಲ್ಲಿಗೆ ತಮ್ಮ ಸಂಚಾರ ಆಗುತ್ತಿರುವುದಿಲ್ಲ. ಗೌಡ-ದ್ರಾವಿಡ ಭೇದದಿಂದ ಸಾಪಂಕ್ತ್ಯವೂ ಇರುವುದಿಲ್ಲ. ಇತ್ಯಾದಿ ಅಡಚಣೆಗಳನ್ನು ಪರ್ಯಾಲೋಚಿಸಿ, ಪ್ರತ್ಯೇಕ ಶಾಖಾಮಠ ಮಾಡುವುದು ಒಳ್ಳೆಯದೆಂದು ಭಾವಿಸಿ, ಈಗ ಗೋಕರ್ಣ ಪರ್ತಗಾಳೀಮಠವೆಂದು ಪ್ರಸಿದ್ಧವಾದ ಮಠವನ್ನು ಸ್ಥಾಪಿಸಿದರು ಎಂದು ತಿಳಿಯುತ್ತದೆ. ಅಂದಮೇಲೆ ಸನ್ಯಾಸಕೊಡಲು ಅರ್ಹರೆಂದು ಸನ್ಯಾಸದೀಕ್ಷಾ ಕೊಟ್ಟ ಶೀವಳ್ಳಿಯವರು, ಗೌಡಸಾರಸ್ವತರು ಶೂದ್ರರೆಂದು ಹೇಗೆ ಭಾವಿಸುತ್ತಾರೆ? ಸಹಭೋಜನ, ಸಹವಿವಾಹಗಳು ಪರಸ್ಪರ ಇಲ್ಲದಿರಲು ಕಾರಣವೇನಂದರೆ—ಪಂಚ ದ್ರಾವಿಡರಿಗೂ, ಪಂಚಗೌಡರಿಗೂ ಪರಸ್ಪರ ಸಹಭೋಜನ, ಸಹವಿವಾಹಾದಿಗಳೂ ಕೆಲ ಆಚಾರಭೇದಗಳೂ ನಿಷಿದ್ಧವಾಗಿವೆ. ಇದನ್ನೋ ಬೋಧಾಯನ ಧರ್ಮಸೂತ್ರ, ಸಹ್ಯಾದ್ರಿಖಂಡಗಳಲ್ಲಿ ಕಾಣಬಹುದು. ಈಗಲೂ ಉತ್ತರ ಹಿಂದೂಸ್ಥಾನದಲ್ಲಿರುವ ಪಂಚಗೌಡರು ದಕ್ಷಿಣದ ದ್ರಾವಿಡರೊಡನೆ ಕಚ್ಚಾರಸೋಯಿ ಅಕ್ಕಿ, ಬೇಳೆ, ಬೇಯಿಸಿದ ಅಡಿಗೆಯನ್ನು ಉಣ್ಣಲಿಕ್ಕೆ ತಯಾರಿಲ್ಲ. ಪಂಚಗೌಡರೊಳಗೆ ಸಹ ಪಂಚದ್ರಾವಿಡ ರಂತೆ ಪರಸ್ಪರ ಸಾಪಂಕ್ತ್ಯವಿರುವುದಿಲ್ಲ. ಅಂದಮೇಲೆ ದ್ರಾವಿಡರೊಡನೆ ಹೇಗೆ ಸಾಪಂಕ್ತ್ಯವಿರಲಿ. ಶಾಸ್ತ್ರನಿಷಿದ್ಧವೆಂದೇ ಅಶೌಚಾದಿಗಳಲ್ಲಿ ಏಕಪಂಕ್ತಿಯಲ್ಲಿ ಊಟಕ್ಕೆ ನಿರ್ವಿವಾದಸಾಪಂಕ್ತ್ಯ ಇದ್ದವರನ್ನೂ ಸಹ ಕೂಡಿಸಿಕೊಳ್ಳುವುದಿಲ್ಲವಷ್ಟೇ? ಆದುದ ರಿಂದ ಗೌಡಸಾರಸ್ವತರಿಗೂ, ಶೀವಳ್ಳಿಯವರಿಗೂ ಸಾಪಂಕ್ತ್ಯ ಇಲ್ಲದಿರುವಿಕೆಯು ಜಾತಿವೈಷಮ್ಯ ಮೂಲಕವಲ್ಲ. ಶಾಸ್ತ್ರನಿಷೇಧ ಮೂಲಕ ಎಂಬುದನ್ನು ಸರಿಯಾಗಿ ತಿಳಿದುಕೊಳ್ಳಬೇಕು. ಈ ಕೊಂಕಣ-ಗೌಡಸಾರಸ್ವತರೊಳಗಿನ ವ್ಯತ್ಯಾಸವನ್ನರಿಯದೆ ಎರಡು ಶಬ್ದಗಳೂ ಸಮಾನಾರ್ಥಕವೆಂಬ ತಪ್ಪು ಕಲ್ಪನೆ ಈ ಮೊದಲೇ ನಿರೂಪಿಸಿದಂತೆ ಕೆಲವರಲ್ಲಿ ಇನ್ನು ತನಕ ಇರುತ್ತಿದ್ದು, ಅದೂ ತೊಳೆದುಹೋಗಬೇಕು. ಎಷ್ಟೋ ಶತಕ ಸಹಸ್ರಕ ವರ್ಷಗಳಿಂದ ದ್ರಾವಿಡ ದೇಶದಲ್ಲಿದ್ದ ಮೇಲೆ ಇನ್ನೂ ದ್ರಾವಿಡರಾಗುವುದಿಲ್ಲವೇ? ಎಂಬುದೊಂದು ಪ್ರಶ್ನೆ ಇದೆ. ಅದಕ್ಕೆ ಚಿತ್ಪಾವನರಂತೆ ಉಪದ್ವ್ಯಾಪೀ ತನದಿಂದ ಪಂಚದ್ರಾವಿಡಾಂತರ್ಗತರೆಂದು ಪ್ರಚಾರ ಮಾಡುತ್ತಾ ಇರಬೇಕಿತ್ತು. ಗೌಡಸಾರಸ್ವತರೆಂಬ ಹೆಸರನ್ನು ಸಹ ಬಿಡಬೇಕಾಗಿತ್ತು. ಹಾಗೆ ಮಾಡಿದರೆ ದ್ರಾವಿಡ ರಾಗುತ್ತಾರೆಯೋ? ಎಂಬ ಮಾತು ಬೇರೆ. ಎಲ್ಲಿ ತನಕ ಗೌಡಸಾರಸ್ವತರೆಂದೇ ಹೇಳಿ ಕೊಳ್ಳುತ್ತಾರೋ ಅಲ್ಲಿ ತನಕ ದ್ರಾವಿಡಾಂತರ್ಗತ ಆಗುವುದಾದರೂ ಹೇಗೆ? ಮತ್ತು ದ್ರಾವಿಡರಾಗದೆ ಇರುವುದರಿಂದ ಕೊರತೆ ಏನು?

**K. P.** ಪುರಾಣಿಕರು ತನ್ನ "ಗೌಡಸಾರಸ್ವತರು" ಪುಸ್ತಕದ ಪುಟ 49ರಲ್ಲಿ ಬರೆಯುತ್ತಾರೆ. "ಗೌಡಸಾರಸ್ವತರಲ್ಲಿ ಅನೇಕ ಒಳಪಂಗಡಗಳು ಇರುತ್ತವೆ. ಒಂದು ಪಂಗಡಕ್ಕೂ ಇನ್ನೊಂದು ಪಂಗಡಕ್ಕೂ ಸಹಪಂಕ್ತಿಯಿಲ್ಲ. ಆದುದರಿಂದ ಒಬ್ಬರು ಇನ್ನೊಬ್ಬರೊಡನೆ ಸಹಪಂಕ್ತಿಗೆ ಸೇರುವುದು ಸಾಧ್ಯವಿಲ್ಲ. ಅದರಲ್ಲಿ ಯಾರಾದರೂ

ಮೇಲು ಕೀಳು ಎಂಬ ಭಾವನೆಯಿಲ್ಲ. ಮೊದಲಿನಿಂದಲೂ ಹಾಗೆ ನಡೆದು ಬಂದಿದೆ. ಖಾಸಗಿಯಾಗಿ ಕೆಲವರು ಮನೆಗಳಲ್ಲಿ ಒಟ್ಟಿಗೆ ಊಟ-ತಿಂಡಿಗಳನ್ನು ಮಾಡುತ್ತಾರಾದರೂ, ಸಾಮೂಹಿಕವಾಗಿ ನಡೆಯುವ ಮಹಾಸಂತರ್ಪಣೆಯಲ್ಲಿ—ಮದುವೆ, ಉಪನಯನ, ಮೊದಲಾದ ಸಮಾರಂಭದಲ್ಲಿ ಒಟ್ಟಿಗೆ ಕಲೆತು ಭೋಜನವಿರುವುದಿಲ್ಲ. ಇದು ನಿಜವಾದ ಪರಿಸ್ಥಿತಿ." ಹೀಗೆ ಅವರ ಉಲ್ಲೇಖವಿರುತ್ತಿದ್ದು ಆಚಾರ, ಸಂಪ್ರದಾಯ, ಶಾಸ್ತ್ರ, ಇವುಗಳೇ ಸಹಭೋಜನಕ್ಕೆ ನಿಯಾಮಕವಾಗುತ್ತದೆ. ಜಾತಿವೈಷಮ್ಯವೊಂದೇ ಅಲ್ಲ ಎಂದು ಅದರಿಂದಲೂ ಸಿದ್ಧವಾಗುತ್ತದೆ.

## ಶೀವಳ್ಳಿಯವರು

ಶೀವಳ್ಳಿಯವರ ಕುರಿತು ಸಹ್ಯಾದ್ರಿ ಮುದ್ರಿತ ಪುಸ್ತಕದ ಉತ್ತರಾರ್ಧ 9ನೇ ಅಧ್ಯಾಯದಲ್ಲಿ ಈ ಕೆಳಗಿನ ಶ್ಲೋಕಗಳಿವೆ—

ಗತೇತು ಕತಿಚಿತ್ ಕಾಲೇ ರವಿವಂಶ ಸಮುದ್ಭವಃ |
ಮಯೂರವರ್ಮಾ ನೃಪತಿಃ ಹೇಮಾಂಗದ ಕುಮಾರಕಃ ||
ಶೂದ್ರಪ್ರಾಯಾನ್ ದ್ವಿಜಾನ್ ಪ್ರೇಕ್ಷ್ಯ ಶಿಖಿವರ್ಮಾ ಸ್ವರಾಷ್ಟ್ರಜಾನ್ |
ಅಹಿಚ್ಛತ್ರಂ ಸಮಾಗತ್ಯ ತತ್ರತ್ಯಾನ್ ದ್ವಿಜಪುಂಗವಾನ್ ||
ಆನೀಯ ಸ್ವಪುರಂ ತೇಭ್ಯೋ ದದೌ ಗ್ರಾಮಾನ್ ಮುದಾನ್ವಿತಃ |

ಅಂದರೆ, ಮಯೂರವರ್ಮನೆಂಬ ಸೂರ್ಯವಂಶದ ರಾಜನು ತನ್ನ ರಾಜ್ಯದಲ್ಲಿದ್ದ ಬ್ರಾಹ್ಮಣರು ಶೂದ್ರರಂತಿರುವುದನ್ನು ಕಂಡು ಉತ್ತಮ ಬ್ರಾಹ್ಮಣರನ್ನು ಬಯಸಿ ಗೋದಾವರೀ ತೀರದ ಅಹಿಚ್ಛತ್ರದಿಂದ ಕರೆತರಿಸಿ ಗ್ರಾಮಗಳನ್ನು ಕೊಟ್ಟು ನೆಲೆಸಿದನು. ಆತನ ತಂದೆ ಹೇಮಾಂಗದನೆಂದು ಬೇರೆ ಕೆಲ ಪುಸ್ತಕಗಳಲ್ಲಿ ಮಣಿವರ್ಮನೆಂದು ಉಕ್ತವಾಗಿದೆ.

ಮಯೂರವರ್ಮಾ ನೃಪತಿಃ ಹೇಮಾಂಗದ ಕುಮಾರಕಃ |
ಸಪುತ್ರಪೌತ್ರಸಹಿತಾನ್ ಆಗತಾನ್ ದ್ವಿಜಪುಂಗವಾನ್ ||
ಪ್ರಸಾದಯಿತ್ವಾ ತಾನ್ ವಿಪ್ರಾನ್ ಧನಸತ್ಕಾರಭೋಜನೈಃ |
ಅಗ್ರಹಾರಾನ್ ಚಕಾರಾಸೌ ದ್ವಾತ್ರಿಂಶದ್ಗ್ರಾಮಭೇದತಃ ||
ಚಂದ್ರಾಂಗದಂ ಸ್ವತನಯಂ ಬಾಲಂ ಸಂಪ್ರೇಕ್ಷ್ಯ ನಾರದ ||
ರಾಜ್ಯಭಾರಮಮಾತ್ಯೇಷು ವಿನ್ಯಸ್ಯ ತಪಸೇ ಯಯೌ ||

8ನೇ ಅಧ್ಯಾಯದ ಪೂರ್ವೋಕ್ತ ಶ್ಲೋಕಗಳಿಂದ ತಿಳಿಯಬಹುದಾದ ವಿಷಯ—ಅಹಿಚ್ಛತ್ರದಿಂದ ಬಂದವರು ಪುತ್ರಪೌತ್ರ ಸಹಿತರಾಗಿ ಸಕುಟುಂಬ ಬಂದಿರುತ್ತಾರಲ್ಲದೆ ಬ್ರಹ್ಮಚಾರಿಗಳೇ ಅಗಲಿ, ಮದುವೆಯಾದ ಹೆಂಡರುಮಕ್ಕಳನ್ನು ಬಿಟ್ಟು ಬರೇ ಗಂಡ

ಸಹ ಮಾತ್ರವಾಗಲಿ ಬಂದಿರುವರೆಂದು ಸಿದ್ಧವಾಗುವುದಿಲ್ಲ. ಏಕೆಂದರೆ, ಪುತ್ರಪೌತ್ರ ಸಹಿತರಾಗಿ ಬಂದಿರುವ ಆ ಬ್ರಾಹ್ಮಣರನ್ನು ಹೇಮಾಂಗದನ ಮಗನಾದ ಮಯೂರ ವರ್ಮನು ಧನಸತ್ಕಾರ, ಭೋಜನಾದಿಗಳಿಂದ ಸಂತಸಗೊಳಿಸಿ 32 ಗ್ರಾಮಗಳಲ್ಲಿ ಅಗ್ರ ಹಾರಗಳನ್ನು ಏರ್ಪಡಿಸಿ ಕುಳ್ಳಿರಿಸಿದನು. ಮತ್ತು ಮಗನು ಸಣ್ಣವನಾದುದರಿಂದ ಮಂತ್ರಿಗಳ ಮೇಲೆ ರಾಜ್ಯಭಾರವನ್ನು ಬಿಟ್ಟು ತಪಸ್ಸಿಗೆ ಹೊರಟು ಹೋದನು ಎಂತಿದೆ. ಮತ್ತು ಯಾಗ ವಗೈರೆ ತಾತ್ಕಾಲಿಕ ಕೆಲಸಕ್ಕೆಂದು ಕರೆಸಿದ್ದಲ್ಲ. ಇಲ್ಲಿಯ ಭೂಮಿಯಲ್ಲಿ ಶಾಶ್ವತ ನೆಲಸಲಿಕ್ಕೆಂದು ಕರೆದುಕೊಂಡು ಬಂದಿರುವುದು. ಕಾರಣ ತಿರುಗಿ ಹೋಗುವ ಆಲೋಚನೆಯಿಂದ ಬಂದಿರಲಿಲ್ಲ. ಹಾಗೆ ಬರುವಾಗ ಹೆಂಡರು ಮಕ್ಕಳನ್ನು ಬಿಟ್ಟು ಬರುವ ಸಂಭವವೂ ಇರುವುದಿಲ್ಲ. ಒಂದೆರಡು ಕುಟುಂಬಗಳು ಬಂದದ್ದೂ ಅಲ್ಲ. ಹಲ ವಾರು ಕುಟುಂಬಗಳು ಬಂದಿರುತ್ತಾರೆ. ಮುಂದೆ ಮದುವೆ ಆಗದವರಿಗೆ ಮದುವೆ ಆಗಲು ತಮ್ಮೊಳಗೆನೇ ಸಾಕಷ್ಟು ಕನ್ನೆಯರು ಇರುತ್ತಿದ್ದುದರಿಂದ ಶೂದ್ರರ ಸ್ತ್ರೀಯರನ್ನು ಮದುವೆ ಆಗುವ ಆವಶ್ಯಕತೆಯೂ ಉಂಟಾಗಿರಲಿಲ್ಲ. ಮತ್ತು ಮೊದಲಿದ್ದವರು ಶೂದ್ರಾದಿ ಸಂಬಂಧದಿಂದಲೂ ಇತರ ಅನಾಚಾರಗಳಿಂದಲೂ ಶೂದ್ರಪ್ರಾಯರಾದವ ರನ್ನು ನೋಡಿ ವಿಶಿಷ್ಟ ಬ್ರಾಹ್ಮಣರು ಬೇಕೆಂದು ಬಯಸಿ ಸದಾಚಾರಸಂಪನ್ನರೆಂದು ಕರೆ ತಂದ ಶೀವಳ್ಳಿಯವರು ತಮ್ಮ ವೈಶಿಷ್ಟ್ಯವನ್ನು ಕಾದುಕೊಳ್ಳಲಿಕ್ಕಾದರೂ ಶೂದ್ರ ಸ್ತ್ರೀಯರ ಕೂಡೆ ವಿವಾಹಸಂಬಂಧವನ್ನು ಇಟ್ಟುಕೊಳ್ಳುವ ಸಂಭವವೂ ಇರುವುದಿಲ್ಲ. ಜಾಗರೂಕತೆಯಿಂದ ತಮ್ಮ ಪಾವಿತ್ರ್ಯವನ್ನು ಸಂರಕ್ಷಿಸಲೇ ಬೇಕಾಗಿತ್ತು. ಅತಏವ ಒಬ್ಬಿಬ್ಬರು ಹಾಗೆ ಶೂದ್ರಸಂಪರ್ಕ ಇಟ್ಟುಕೊಂಡಿದ್ದರೆ ಅದರ ಪತ್ತೆ ಹಚ್ಚಿ ಅವರನ್ನು ತಮ್ಮ ಪಂಗಡದಿಂದ ಹೊರಹಾಕಿ ಪತಿತರೆಂದು ಬೇರೆಯಾಗಿ ಇಡಲ್ಪಟ್ಟಿದ್ದರು. ಅಧ್ಯಾಯ 9ರಿಂದ 19ರ ವರೆಗೆ ಬೇರೆ ಬೇರೆ ಕಾರಣದಿಂದಾಗಿ ಪತಿತರಾದವರ ವರ್ಗಗಳನ್ನೆ ವಿವರಿ ಸಿಯದೆ ಉತ್ತರ ಸಹ್ಯಾದ್ರಿಯಲ್ಲಿ. ಇದರಿಂದ ತಿಳಿಯುತ್ತದಲ್ಲ. "ಆದಷ್ಟು ತಮ್ಮ ಪರಿ ಶುದ್ಧತೆಯನ್ನು ಕಾಯ್ದುಕೊಳ್ಳುತ್ತಾ ಕಟ್ಟುನಿಟ್ಟಾದ ಬಂದೋಬಸ್ತು ಮಾಡಿಕೊಳ್ಳು ತ್ತಿದ್ದರು. ಶಿಸ್ತಿನಿಂದ ಸರ್ವೋಚ್ಚಸ್ಥಾನದಲ್ಲಿರುತ್ತಾ ಜಗತ್ತಿಗೆ ಆದರ್ಶಬ್ರಾಹ್ಮಣರಾಗಿ ಇರುತ್ತಿದ್ದರು. ಅತಏವ "ಕಾಲೆ ಕಲೌ ಸುವಿಮಲಾನ್ವಯ ಲಬ್ಧಜನ್ಮಾ" (ಕಲಿಕಾಲ ದಲ್ಲಿ ಸಹ ಅತ್ಯಂತ ಪರಿಶುದ್ಧವಾದ ಕುಲದಲ್ಲಿ ಹುಟ್ಟಿದರು ನಾರಾಯಣ ಭಟ್ಟ ನಡ್ಹಿಲ್ಲಂತಾಯರು). "ತತ್ರಾಪಿ ಬ್ರಹ್ಮಜಾತಿ ತ್ರಿಭುವನ ವಿಶದೆ" ನಡ್ಹಿಲ್ಲಂತಾಯ ಕುಲವು ಮೂರು ಲೋಕದಲ್ಲಿ ಶ್ರೇಷ್ಠವಾದ ಬ್ರಾಹ್ಮಣಜಾತಿ ಯಾಗಿತ್ತು. ಹೀಗೆ ಹೇಳಿಸಿ ಕೊಳ್ಳುವಂತೆ ಶೀವಳ್ಳಿ ಜಾತಿಯು ಪ್ರಖ್ಯಾತವಾಗಿತ್ತು.

ತು. ಪು. ಪು. 148, 149ರಲ್ಲಿ ಕೆಳಗಿನಂತೆ ಇಂಡೆಕ್ಸ್ ಕೋಷ್ಟಕ ಕೊಟ್ಟಿದೆ. "ದಕ್ಷಿಣ ಹಿಂದೂಸ್ಥಾನದ ಪ್ರಬಲವಾಗಿರುವ ಎಲ್ಲಾ ಹಿಂದೂ ಬ್ರಾಹ್ಮಣ ವರ್ಗಗಳ ತಲೆಬುರುಡೆಯ ಪರಿಮಾಣವನ್ನು ತೋರಿಸುವ ಪಟ್ಟಿಯನ್ನು ಕೆಳಗೆ ಕೊಟ್ಟಿದೆ.

| | ಸೆ. ಮೀ. |
|---|---|
| ತಮಿಳು ಸ್ಮಾರ್ತ ಬ್ರಾಮ್ಹಣ . . . | 72·2 |
| ಮಹಾರಾಷ್ಟ್ರ ದೇಶಸ್ಥ ಬ್ರಾಮ್ಹಣ . . . | 76·9 |
| ದೇಶಸ್ಥ ಸ್ಮಾರ್ತ ಬ್ರಾಮ್ಹಣ . . . | 77·0 |
| ಕೊಂಕಣಸ್ಥ ಬ್ರಾಮ್ಹಣ . . . . | 77·3 |
| ದೇಶಸ್ಥ ಮಾಧ್ವ ಬ್ರಾಮ್ಹಣ . . . | 78·0 |
| ಕರ್ಣಾಟಕ ಸ್ಮಾರ್ತ ಬ್ರಾಮ್ಹಣ . . . | 78·4 |
| ತುಳು ಶೀವಳ್ಳಿ ಬ್ರಾಮ್ಹಣ . . . | 80·4 |

ತುಳುನಾಡಿನಲ್ಲಿ

| | |
|---|---|
| ಬಿಲ್ಲವರು . . . . . | 77·0 |
| ಬಂಟರು . . . . . | 78·0 |
| ಮೊಗೇರರು . . . . . | 78·2 |
| ಬ್ರಾಮ್ಹಣರು . . . . . | 80·4 |

"ತುಳು ಶೀವಳ್ಳಿಯವರ ತಲೆಬುರುಡೆ ಪರಿಮಾಣವು ಎಲ್ಲಾ ಬ್ರಾಮ್ಹಣ ವರ್ಗಕ್ಕಿಂತಲೂ, ಇತರ ಜಾತಿಗಿಂತಲೂ ವಿಶಿಷ್ಟವಾಗಿದೆ" ಎಂದು ಇದರಿಂದ ತಿಳಿಯುತ್ತದೆ. ಇದರ ಮೊದಲನೇ ಪಂಕ್ತಿಯಿಂದ ಈ ತಲೆಬುರುಡೆ ಪರಿಮಾಣವು ಪ್ರಾಬಲ್ಯಕ್ಕೆ ಕಾರಣವೆಂದು ತೋರಿಸಿ ಕೊಡಲಾಗಿದೆ. ಅಂತೂ ಇತರ ಎಲ್ಲರಿಗಿಂತಲೂ ತುಳು ಶೀವಳ್ಳಿಯವರಲ್ಲಿ ಒಂದು ವೈಶಿಷ್ಟ್ಯವು ಉಂಟೆಂದು ಪರಕೀಯನಾದ ಥರ್ಸ್ಟನ್ ಕಂಡುಹಿಡಿದಿರುವನು ಎಂದು ಭಟ್ಟರು ಒಪ್ಪಿರುತ್ತಾರೆ. ಅದರ ಕಾರಣವನ್ನು ಆತನು ತನ್ನ ವಿಚಾರದಂತೆ ಏನೇ ಕಲ್ಪಿಸಲಿ, ನಾವೂ ಕಾರಣ ಹುಡುಕೋಣವಂತೆ. ತುಳುವ ಶೀವಳ್ಳಿಯವರಲ್ಲಿ ಒಂದು ತರದ ವೈಶಿಷ್ಟ್ಯವಿದೆ ಎಂದು ಸಿದ್ಧವಾಯಿತಲ್ಲಾ ಇದನ್ನು ಒಪ್ಪಬೇಕು. ಥರ್ಸ್ಟನ್ ಬರೆಯುತ್ತಾನೆ— "ತುಳು ಬ್ರಾಮ್ಹಣರ ಇಂಡೆಕ್ಸ್ ಹೆಚ್ಚಾಗಲಿಕ್ಕೆ ಅನುರಕ್ತಸಂಬಂಧವೇ ಕಾರಣವೆಂದು. ಅಂದರೆ ಬಂಟರ ಜಾತಿಯ ಹೆಂಗಸರ ಸಂಬಂಧದಿಂದ ಇಂಡೆಕ್ಸ್ ಹೆಚ್ಚಾದದ್ದು ಅಂತ ಆತನ ಅಭಿಪ್ರಾಯವಾಗುತ್ತದೆ. ಇದನ್ನು ಉದಾಹರಣೆ ತೋರಿಸಿ ವ್ಯಾಪ್ತಿಯನ್ನು ದೃಢಪಡಿಸಿ ತರ್ಕದಿಂದ ಸಿದ್ಧಮಾಡಬೇಕಾಗುತ್ತದೆ. ಅದು ಮಾಡಿಲ್ಲ. ವಿಜಾತೀಯ ಸ್ತ್ರೀ-ಸಂಬಂಧದಿಂದ ಇಂಡೆಕ್ಸ್ ಹೆಚ್ಚುತ್ತದೆ. ಇಂಥವರಲ್ಲಿ ಹೀಗೆ ನಿಶ್ಚಿತವಾಗಿದೆ. ಹಾಗೇನೇ ತುಳುವರಲ್ಲಿ ಇಂಡೆಕ್ಸ್ ಹೆಚ್ಚು ಇದ್ದುದರಿಂದ ಅದರ ಕಾರಣವಾದ ಜಾತಿ ಸಾಂಕರ್ಯ (ಕಶಿಮಾಡುವಿಕೆಯು) ಆಗಿರಬೇಕು ಅಂತ ನಿರ್ಣಯಿಸಿ ಬರೆಯಬೇಕಾಗಿತ್ತು. ಮತ್ತು ಹಾಗೆ ಅನುರಕ್ತ ಸಂಬಂಧವು ಇಂಡೆಕ್ಸ್ ಹೆಚ್ಚುವುದಕ್ಕೆ ಕಾರಣ ಎಂದು ನಿರ್ಧರಿಸಬೇಕು. ಅದು ಯಾವುದೂ ಇಲ್ಲ—ಕೇವಲ ಊಹೆ. ಅದೂ ಪರಿಶುದ್ಧವಾದ ಬ್ರಾಮ್ಹಣ ಸಂತತಿಯವರು ಶೂದ್ರರಿಂದಾಗಲಿ, ಬ್ರಾಮ್ಹಣೇತರರಿಗೆ ಬ್ರಾಮ್ಹಣರ ಮೇಲೆ

ತಾತ್ಸಾರಬುದ್ಧಿ ಹುಟ್ಟಲಿ, ಬ್ರಾಮ್ಹಣ ಮುಖಂಡತ್ವ ಸಮಾಜದಲ್ಲಿ ಅಳಿದುಹೋಗಲಿ. ಇತ್ಯಾದಿ ಅಭಿಲಾಷೆಗಳು ಇದರಿಂದ ವ್ಯಕ್ತವಾಗುವಂತಿದೆ. ಇದರ ಕಾರಣವೆಂದರೆ ಭಾರತ ಭೂಮಿಯಲ್ಲಿ ಕಟ್ಟುನಿಟ್ಟಾದ ಚಾತುರ್ವರ್ಣ್ಯನಿಯಮ, ಅಸ್ಖಲಿತಪಾತಿವ್ರತ್ಯ, ವ್ಯಭಿಚಾರವೆಂದರೆ ಮಹಾಪರಾಧ, ಎಂದು ಮುಂತಾದಾಗಿ ಇಲ್ಲಿ ಬಂದು ನೋಡಿ ಹೋದ ಯುರೋಪದ ಜನರು ಬರೆದಿರುವ ಯಥಾರ್ಥ ಭಾರತದ ಇತಿಹಾಸವನ್ನು ಓದಿ ಆಶ್ಚರ್ಯ ಪಟ್ಟವರು; ಭಾರತೀಯರ ಮೇಲಿನ ಅಸೂಯೆಯಿಂದ ಇಲ್ಲಿ ಬಂದು ತಮ್ಮಂತೇನೆ ಯಾವ ನಿರ್ಬಂಧವೂ ಇಲ್ಲದೆ ಸ್ವಛ್ಛಂದಚಾರಿಗಳಾಗಿದ್ದಾರೆ, ತಮಗಿಂತ ಯಾವ ವೈಶಿಷ್ಟ್ಯವೂ ಭಾರತೀಯರಲ್ಲಿ ಇರುವುದಿಲ್ಲವೆಂದು ಅಪಪ್ರಚಾರ ಮಾಡುವುದೇ ಆಗಿರುತ್ತದೆ. ಮತ್ತು ಅಂಥಾ ಪುಸ್ತಕಗಳನ್ನೇ ಅಭ್ಯಾಸ ಮಾಡಿಸಿ ಭಾರತೀಯರನ್ನು ಸ್ವಛ್ಛಂದಚಾರಿಗಳನ್ನಾಗಿ ಮಾಡುವುದೂ ಆಗಿರುತ್ತದೆ. ಅದು ಈಗ ಪ್ರಾಯಶಃ ಕೆಲವರಲ್ಲಿ ಜ್ಯಾರಿಯಲ್ಲಿ ಬಂದಿರುತ್ತದೆ. ಹೀಗೆಲ್ಲಾ ಉದ್ದೇಶವಿಟ್ಟುಕೊಂಡು ಭಾರತೀಯರ ಬುದ್ಧಿ ಕೆಡಿಸಲು ಬರೆದಿರುವ ಗ್ರಂಥಗಳನ್ನು ಪಾರಮಾರ್ಥಿಕ, ಸತ್ಯವೆಂದು ನಂಬಿಕೊಂಡು ಅದನ್ನೇ ವಿವರಣ ಸಹಿತ ಪ್ರಚಾರ ಮಾಡುತ್ತಾರಲ್ಲಾ? ಇಂಥಾ ಸಂಶೋಧಕರ ಬುದ್ಧಿಗೆ ಏನು ಬೆಲೆ ಕಟ್ಟಬೇಕೆಂದು ಅವಗಾಹನೆಗೆ ಅಗೋಚರವಾದ ವಿಷಯವಾಗಿದೆ.

ಇನ್ನೊಂದು ವಿಷಯ—ಮಹಾರಾಷ್ಟ್ರದಲ್ಲಿ ಒಂದು ಗ್ರಾಮದಿಂದ ಇನ್ನೊಂದು ಗ್ರಾಮಕ್ಕೆ ಹೋದರೆ ಆ ಜನರಿಗೆ ಮೊದಲನೇ ಊರಿನ ಹೆಸರ ಮೇಲೆ "ಕರ" ಎಂಬ ಪ್ರತ್ಯಯ ಹಚ್ಚಿದರೆ ಅದು ಅವರ ಉಪನಾಮವಾಗಿಬಿಡುತ್ತದೆ. ಉದಾಹರಣೆ—ಅಜರೆ ಎಂಬುದೊಂದು ಗ್ರಾಮ, ಅಲ್ಲಿದ್ದವನು ಬಿಜಾಪುರಕ್ಕೆ ಬಂದು ನಿಂತರೆ ಆತನ ಉಪನಾಮ "ಅಜರೇಕರ್" ಆಗುತ್ತದೆ. ಅದರಂತೇನೆ ಕೊಳಟಕರ್, ಚಿಪಳೂಣೂರಕರ್, ಧಾರವಾಡಕರ್, ಇತ್ಯಾದಿ. ಇದು ಶೂದ್ರನಿಗೂ ಮತ್ತು ಬ್ರಾಮ್ಹಣನಿಗೂ ಈ ನಾಮ ಹತ್ತಬಹುದು.

ಅದರಂತೇನೆ ತುಳುವದಲ್ಲಿ ಗ್ರಾಮ, ದಿಕ್ಕು, ಮರ ಮೊದಲಾದ ಒಂದು ಸಂಕೇತ ವಿಟ್ಟು ಅದರ ಮುಂದೆ "ಅಲ್ಲಿಯವ" ಎಂಬರ್ಥದ "ಆಯ" ಪ್ರತ್ಯಯ ಹಚ್ಚಿದರೆ ಅದು ಆತನ ಉಪನಾಮವಾಗುತ್ತದೆ. ಶಿಬರೂರಾಯ, ಸಿಮಂತೂರಾಯ, ಪೆಜತ್ತಾಯ, ಕುಕ್ಕಿಲ್ಲಾಯ, ಮೂಡಿಲ್ಲಾಯ, ಬಡಗಿಲ್ಲಾಯ ಇತ್ಯಾದಿ. ಇದರಂತೇನೆ ನಾಡವರಿಗೂ ಸಹ ಪಾಂಗಳಣ್ಣಾಯ, ಕೆಲ್ಲಾರಬಣ್ಣಾಯ, ಬಂಗಾರಣ್ಣಾಯ, ಇತ್ಯಾದಿ ಉಪನಾಮಗಳುಇವೆ. ಇದನ್ನೆಲ್ಲಾ ನೋಡಿಕೊಂಡು ಬಂಟರವರ ಹೆಸರೂ, ಬ್ರಾಮ್ಹಣರ ಹೆಸರೂ ಒಂದೇ ತರ ಇರುವುದರಿಂದ ಬಂಟರ ಹೆಂಗಸರನ್ನು ಬ್ರಾಮ್ಹಣರು ಮದುವೆ ಆಗಿರಬೇಕು, ಎಂತ ಥರ್ಸ್ಟನ್ ದೊರೆಯು ಬರೆದಿರುತ್ತಾನೆ. ಇದು ಅಭಿಲಾಷೆ ಮಾತ್ರ ಪಟ್ಟಿರುವದು ಎಂದು ತುಳುನಾಡು ಪುಸ್ತಕ ಪೇಜು 149, 150ನೇದರಲ್ಲಿ ಬರೆದ ಬರಹದಿಂದ ತಿಳಿಯಬಹುದಾಗಿದೆ. ಗುರುರಾಜ ಭಟ್ಟರ ವಿಮರ್ಶಕ ಬುದ್ಧಿಶಕ್ತಿಗೆ ಅದು ಯಥಾರ್ಥವಾಗಿ ಕಂಡುಬಂದದೆ. ಅವರು ನಮ್ಮ ತುಳುನಾಡು ಮಾತ್ರ ಯಾಕೆ ಇಡೀ ದಕ್ಷಿಣ ಭಾರತದ ಬ್ರಾಮ್ಹಣ ವರ್ಗವೇ ಶೂದ್ರ ಸ್ತ್ರೀಸಂತತಿಯಿಂದ ಏರ್ಪಟ್ಟಿದ್ದು

ಎಂಬ ಬಗ್ಗೆ 5—6 ತೀರ್ಮಾನಗಳನ್ನು ಮಾಡಿರುತ್ತಾರೆ. ಎಲ್ಲಾ ತೀರ್ಮಾನಗಳ ತಾತ್ಪರ್ಯವಿಷ್ಟೆ. ಬ್ರಾಹ್ಮಣರ ವೈಶಿಷ್ಟ್ಯ ಇರಬಾರದು. ಅವರು ಶೂದ್ರ ಸಂತತಿಯವರು ಆಗಿರಬೇಕು. ಅವರು ಶ್ರೇಷ್ಠರೆಂಬುದರಲ್ಲಿ ಅರ್ಥವೇನೂ ಇಲ್ಲ. ಇತ್ಯಾದಿ ತಮ್ಮಲ್ಲಿರುವ ಅಭಿಪ್ರಾಯ ಪ್ರಕಟಣೆಯೇ ಸರಿ. ಆದರೂ ಈ ಸಂಶಯಗ್ರಸ್ತ ಮನುಷ್ಯ "ಥರ್ಸ್ಟನ್ ಮಾಡಿದ ಪ್ರಯೋಗವು ಭೌತ ವಿಜ್ಞಾನದಂತೆ ಸತ್ಯವೆಂದು ನಂಬುವುದೂ ಕಷ್ಟ. ಏಕೆಂದರೆ ಅವರ ಪ್ರಯೋಗವನ್ನು ಮತ್ತೂ ಮುಂದುವರಿಸಿ ಅನೇಕಾನೇಕ ದೃಷ್ಟಾಂತಗಳಿಂದ ದೃಢೀಕರಿಸುವುದು ಅಗತ್ಯವಿದೆ ಎನ್ನುತ್ತಾರೆ. ಆದರೆ "ಅವರ ತೀರ್ಮಾನವನ್ನು ಕಿತ್ತೊಗೆಯಲೂ ಅಸಾಧ್ಯ" ಎಂದೂ ಬರೆಯುತ್ತಾರೆ. ಅಂದರೆ ವ್ಯಾಪ್ತಿ ನಿಶ್ಚಯವಿಲ್ಲದುದರಿಂದ ಅನುಮಾನ ಅಸಾಧಕವೆಂದು ಸಾಧಿಸಿದರೂ ಪ್ರತಿಜ್ಞಾತಾರ್ಥ ಬಿಡಲು ಸಾಧ್ಯವಿಲ್ಲವೆನ್ನುತ್ತಾರಲ್ಲಾ! ಇದು ಎಂಥಾ ವಿವೇಚನಾಶಕ್ತಿ ಭಟ್ಟರದ್ದು? ಅಥವಾ ಯುಕ್ತಿಶೂನ್ಯವಾಗಿದೆ ಎಂದು ಯುರೋಪಿಯನರ ಮಾತುಗಳನ್ನು ಅಲ್ಲಗಳೆಯುತ್ತಾ ಹೋದರೆ ಇತಿಹಾಸದ ದಾರ (ಹಗ್ಗ) ಹರಿದುಹೋಗಿ ಚರಿತ್ರೆ ಎಂಬುದೇ ಮುಳುಗಿ ಹೋದೀತೆಂದು ಭಟ್ಟರು ಭಯಪಟ್ಟಿರಬಹುದು. ಅವರ ಗ್ರಂಥ ಓದಿದವರಿಗೆ ಇಂಗ್ಲೀಷ್ ಬುಕ್ಕಿನಲ್ಲಿ ಬರೆದಿದ್ದರೆ ಚಾರಿತ್ರಿಕ ಬರೆದಿಲ್ಲವಾದರೆ ಐತಿಹಾಸಿಕವಲ್ಲ ಎಂಬ ಕಲ್ಪನೆ ಸಹಜವಾಗಿ ಮೂಡುತ್ತದೆ. ಏನೇ ಇರಲಿ. ಥರ್ಸ್ಟನ್ ಥೋರೆ ಬರೆದುದರಿಂದ ಒಂದು ವೇಳೆ ಚಾರಿತ್ರಿಕವೆಂದು ಭಟ್ಟರು ಹೇಳಬಹುದಾದರೂ, ಶೀವಳ್ಳಿಯವರು ಶೂದ್ರಸ್ತ್ರೀ ಸಂತತಿಯವರೆಂಬ ಸಂಗತಿ ಯುಕ್ತಿಶೂನ್ಯವೆಂದು ಒಪ್ಪಿದಂತಾಯಿತು. ಇದು ನಿಶ್ಚಿತ. ಇದು ಮಾತ್ರವಲ್ಲದೆ (ತು. ಪು. ಪು. 144ರಲ್ಲಿ) "ಬ್ರಾಹ್ಮಣ ವರ್ಗದಲ್ಲಿ ಶೀವಳ್ಳಿಯವರು ಉತ್ತಮ ವರ್ಗಕ್ಕೆ ಸೇರಿದವರು ಎಂದು ಸಂಪ್ರದಾಯ ತಿಳಿಸುತ್ತದೆ. ಸಹ್ಯಾದ್ರಿಖಂಡವೂ ಇದನ್ನು ಪುಷ್ಟೀಕರಿಸುತ್ತದೆ" ಎಂದು ಬರೆಯುತ್ತಾರೆ. ಮನಃಸಂಯಮ ವಾಕ್ಸಂಯಮಗಳಿಂದ ಎಷ್ಟು ತಡೆ ಹಿಡಿದರೂ ಕೆಲವೊಮ್ಮೆ ಅಪ್ಪಿತಪ್ಪಿ ವಸ್ತುಸ್ಥಿತಿಯು ಹೊರಬೀಳುತ್ತದೆ ಭಟ್ಟರ ಲೇಖನಿಯಿಂದ. ಅಷ್ಟು ಮಾತ್ರದಿಂದಲೇ ಸಿದ್ಧವಾಗಬಹುದಾದ ವಿಷಯವೆಂದರೆ ಶೀವಳ್ಳಿಯವರಲ್ಲಿ ಇತರ ಪಂಗಡಗಳಿಂದ ಒಂದು ತರದ ವೈಶಿಷ್ಟ್ಯವಿದೆ. ಅವರನ್ನು ಹೀನಗೊಳಿಸಲು ಸಂಚುಹೂಡಿ ನಡೆಯಿಸಿದ ಯುಕ್ತಿಗಳು ಅರ್ಥಶೂನ್ಯವು ಎಂಬುದು.

ಪ್ರಕೃತ ಮಯೂರವರ್ಮನು ಕೆಲವು ಸಮಯದ ನಂತರ ರಾಜ್ಯಭಾರದಿಂದ ನಿವೃತ್ತನಾಗಬೇಕಾದಾಗ ಚಂದ್ರಾಂಗದನು ಸಣ್ಣವನಾದುದರಿಂದ ಮಂತ್ರಿಗಳ ಕೈಯಲ್ಲಿ ರಾಜ್ಯ ಕಾರಬಾರ ಬಿತ್ತು. ಅಹಿಚ್ಛತ್ರದ ಜನರ ಏಳಿಗೆಯನ್ನು ನೋಡಿ ಮೊದಲೇ ಮತ್ಸರ ಪಡುತ್ತಿದ್ದ ಪೂರ್ವ ನಿವಾಸಿಗಳು ಇದೊಂದು ಅನಾಯಾಸವಾಗಿ ಒದಗಿ ಬಂದ ಅನುಕೂಲ ಪರಿಸ್ಥಿತಿಯನ್ನು ಉಪಯೋಗಿಸಿಕೊಳ್ಳದೆ ಇರಲಿಲ್ಲ. ಆದುದರಿಂದ ನಾನಾ ತರದ ತೊಂದರೆಗೊಳಗಾಗಿ ಅಹಿಚ್ಛತ್ರದವರಿಗೆ ಊರುಬಿಟ್ಟು ಹೊರಡಬೇಕಾಯಿತು. 15ನೇ ಅಧ್ಯಾಯದಲ್ಲಿ ಹೇಳಿದ ಪ್ರಕಾರ ಮೂಲ ನಿವಾಸಿಗಳಿಗೆ ತಮ್ಮ ಗ್ರಾಮಗಳನ್ನು

ಅಪಹರಿಸಿ ಅಹಿಚ್ಛತ್ರದವರಿಗೆ ಕೊಡುವಾಗ ಅಸಮಾಧಾನವಾಗಿತ್ತು ಎಂಬುದು ನಿಜ. ಆದರೆ ರಾಜನು ಅವರ ತಪ್ಪು ಎತ್ತಿಹಿಡಿದು ಮುಂದಿಡುವಾಗ ಅವರು ನಿರುಪಾಯರಾಗಿ ಸುಮ್ಮನಾದರು. ಆದರೂ ರಾಜನು 4 ಗ್ರಾಮಗಳನ್ನು ಅವರಿಗಾಗಿ ಕೊಟ್ಟು ಸಮಾಧಾನ ಪಡಿಸಿರುವನು. ಮತ್ತು ಅವರೊಳಗೆ ಸ್ನೇಹಭಾವ ಕುದುರಬೇಕೆಂದು ಮೂಲನಿವಾಸಿಗಳ ಮುಖಾಂತರವೇ ಅಹಿಚ್ಛತ್ರದವರನ್ನು ಕರೆತರಿಸಿರುವನೆಂದು ನಮೂದು ಇದೆ. ಆದರೂ ಮಯೂರವರ್ಮನ ಪರೋಕ್ಷದಲ್ಲಿ ಅವರು ತಮ್ಮ ಕಾಯಕವನ್ನು ಸಾಧಿಸದೆ ಬಿಡಲಿಲ್ಲ. ಮುಂದೆ ಚಂದ್ರಾಂಗದನು ಅಧಿಕಾರ ವಹಿಸಿದ ಬಳಿಕ ಸಮಾಚಾರ ತಿಳಿದು ಪುನಶ್ಚ ಕರೆತರಿಸಿ ಸ್ಥಿರಗೊಳಿಸಿದನು. ಮತ್ತು ಉಪದ್ರವ ಕಾರಿಗಳಿಗೆ ತೀವ್ರ ದಂಡ ಸಹ ಆಗಿರಬೇಕು. ಆದುದರಿಂದ ಅಹಿಚ್ಛತ್ರದವರಿಗೆ ಪುನಶ್ಚ ತಿರುಗಿ ಹೋಗುವ ಪ್ರಸಂಗ ಬರಲಿಲ್ಲ. ಹೀಗೆ ತಂದೆ ಮಕ್ಕಳಿಂದ 2 ಸಾರೆ ಕರೆತರಿಸಿದ ಈ ಬ್ರಾಹ್ಮಣರು ವಲಸೆ ಬಂದವರಲ್ಲ. ಹಾಗೆ ವಲಸೆ ಬಂದದ್ದೇ ಆದರೆ ಗೌಡ ಸಾರಸ್ವತರಂತೆ ತಮ್ಮ ಮೂಲ ದೇಶದ ನಾಮ, ಗೋತ್ರ, ಕುಲದೇವತಾಗಳನ್ನು ಪದ್ಧತಿಪ್ರಕಾರ ಇಟ್ಟುಕೊಳ್ಳುತ್ತಿದ್ದರು. ಈ ಅಹಿಚ್ಛತ್ರದವರು ಹಾಗಲ್ಲ. ಈ ದೇಶದ ಸಲುವಾಗಿ ದತ್ತಕದಂತೆಯಾಗಿ ಮಯೂರವರ್ಮನಿಂದ ವ ಮಗನಿಂದ ತರಲ್ಪಟ್ಟವರಿದ್ದಾರೆ. ದತ್ತಕ ಮಗನು ತಾನು ಹುಟ್ಟಿದ ಮನೆತನದ ನಾಮಗೋತ್ರಗಳನ್ನು ಬಿಡುತ್ತಾನೆ. ಪರಿಗೃಹೀತೃ ಪರಂಪರೆಯನ್ನು ಅನುಸರಿಸುತ್ತಾನೆ. ಅದರಂತೆನೇ ಹವೀಕ, ಕೋಟ, ಶೀವಳ್ಳಿಯವರು ಹಿಂದಿನ ಯಾವತ್ತೂ ವ್ಯಪದೇಶಗಳನ್ನು ಇಟ್ಟುಕೊಳ್ಳಲು ಅವಕಾಶವಿಲ್ಲ. ಸಾಕುಮಗ ಮತ್ತು ದತ್ತಕಮಗ ಇವರೊಳಗಿನ ವ್ಯತ್ಯಾಸವನ್ನು ವಲಸೆ ಬಂದವರಿಗೂ ಮತ್ತು ಕರೆತರಿಸಿದವರಿಗೂ ತಿಳಿಯತಕ್ಕದ್ದು. ಅತಏವ ಖಂಡಿತವಾಗಿ ಅಹಿಚ್ಛತ್ರದವರು ತುಳುವಕ್ಕೆ ವಲಸೆ ಬಂದವರಲ್ಲ. ಇದನ್ನು ಭಟ್ಟರು ಚೆನ್ನಾಗಿ ತಿಳಿದಿರಲಿ ಮತ್ತು ಚಂದ್ರಾಂಗದನು ತನ್ನ ಮಂತ್ರಿಗಳ ಕೂಡ ವಿಚಾರಿಸಿ ಭಾಷೆ, ವೇಷ, ನಾಮ, ರೀತಿನೀತಿಗಳನ್ನು ಬದಲಾಯಿಸಿದನೆಂದು ಸಹ ನಮೂದು ಇದೆ.

ಗ್ರಾಮೇಷು ಗೃಹಬೇಧೇನ ಪುರಶ್ಚ್ಫುಡಾಂ ತಥೈವ ಚ |
ಇದಂ ಚಿನ್ಹಂ ಕರೋಮಿತಿ ತೇಷಾಂ ಮತಿಮತಾಂವರಃ |
ಸಚಿವೈಃ ಸಹ ಸಮ್ಮಂತ್ರ್ಯ ಪುರಶ್ಚೋಡಾಂ ಚಕಾರ ಸಃ |

ಈ ಶ್ಲೋಕಗಳಲ್ಲಿ ಕೋಟ, ಕೋಟೇಶ್ವರ, ಕಂದಾವರ, ಶೀವಳ್ಳಿ, ಇತ್ಯಾದಿ ಗ್ರಾಮದ ಹೆಸರುಗಳಿಂದ ಕೋಟದವರು, ಶೀವಳ್ಳಿಯವರು ಎಂಬುದಾಗಿಯೂ ಗೃಹಭೇದದಿಂದ ಮೂಡಿಲ್ಲಾಯ, ನಡ್ಡಿಲ್ಲಾಯ, ಬಡಗಿಲ್ಲಾಯ, ಕುಕ್ಕಿಲ್ಲಾಯ, ಇತ್ಯಾದಿ ಕುಲನಾಮ ಅಂದರೆ ಉಪನಾಮಗಳು ಮತ್ತು ಇದೇ ನ್ಯಾಯದಂತೆ ಕಾಲಹೋದಾಗ ಜನರು ಜಾಸ್ತಿಯಾಗಿ ಬೆಳೆದು ಮನೆಗಳು ಹೆಚ್ಚಾದಾಗ ಉಪನಾಮಗಳೂ ಹೆಚ್ಚಾಗುತ್ತಾ ಹೋದವು. ಇದರಂತೆ ಚಿತ್ಪಾವನರಲ್ಲಿಯೂ "ಕರ" ಪ್ರತ್ಯಯದಿಂದ ಕುಲನಾಮಗಳು ವ ಉಪನಾಮ

ಗಳು ಆಗಿದ್ದಾವೆ. ಖರಾಡೆ ಬ್ರಾಮ್ಹಣರ ಕುಲನಾಮುಗಳು ಇವೆ. ಇದನ್ನೆಲ್ಲಾ ಸೋಲಾ ಪುರ ದಾತೆಪಂಚಾಂಗದಲ್ಲಿ ಕೊನೆಗೆ ಬರೆದು ತೋರಿಸಿದ್ದು ಕಾಣಬಹುದು. ಗುರು ರಾಜ ಭಟ್ಟರು. (ತು. 146ರಲ್ಲಿ) "ಒಂದು ಸಮಾಜದವರು ತಾವು ವಸಾಹತು ಮಾಡಲು ಹೋದರೆ ತಮ್ಮ ಮಾತೃದೇಶವನ್ನು ಯಾ ಮಾತೃಭಾಷೆಯನ್ನು ಸೂಚಿ ಸುವ ಹೆಸರನ್ನು ತಮ್ಮ ಸಂಗಡಕ್ಕೆ ಇಟ್ಟುಕೊಳ್ಳುತ್ತಾರೆ. ಅಲ್ಲದೆ ತಾವು ನೆಲೆಸಿದ ದೇಶ ಯಾ ಪ್ರದೇಶದ ಗ್ರಾಮುವನ್ನು ವ ಊರನ್ನು ಕುಲವಾಚಕವಾಗಿ-ಉಪನಾಮವಾಗಿ ಮಾಡಿಕೊಂಡಿದ್ದು ಚರಿತ್ರೆಯಲ್ಲಿ ಕಂಡುಬರುವುದು ವಿರಳ (ಇಲ್ಲ)." ಎಂದು ಬರೆಯು ತ್ತಾರೆ. ಆದರೆ ಚೀನಾದೇಶದಿಂದ ವಲಸೆ ಬಂದ ಖರಾಡೆಯವರು ಈಜಿಪ್ತದಿಂದ ವಲಸೆ ಬಂದ ಚಿತ್ಪಾವನರು ನೆಲೆನಿಂತ ಗ್ರಾಮುಗಳನ್ನು ಕುಲನಾಮ ಉಪನಾಮ ಮಾಡಿ ಕೊಂಡದ್ದು ಸ್ಪಷ್ಟವಿದೆ. ಚರಿತ್ರೆ ಎಂದರೆ ಇಂಗ್ಲೀಷರು ಬರೆದ ಪುಸ್ತಕ, ಅದರಲ್ಲಿ ಬರೆ ದದ್ದು ಚಾರಿತ್ರಿಕ. ಬರೆದಿಲ್ಲವಾದರೆ ಚಾರಿತ್ರಿಕವಲ್ಲ. ಎಂದರೆ ಉಪಾಯವಿಲ್ಲ!

(ತು. ಪು. 151ರಲ್ಲಿ) "ಅಹಿಚ್ಛತ್ರ ಬ್ರಾಮ್ಹಣರ ಕುಲನಾಮುಗಳನ್ನಾಗಲೀ, ಕುಲ ಗಳನ್ನಾಗಲೀ ಮಯೂರವರ್ಮನು ನಿರ್ಮಿಸಿದುದಲ್ಲ"ವೆಂದು ಭಟ್ಟರು ಬರೆಯುತ್ತಾರೆ. ನಿಜವಾಗಿ ಮಯೂರವರ್ಮನು ಕುಲನಾಮುಗಳನ್ನು ನಿರ್ಮಿಸಿಲ್ಲ. ಆತನ ಮಗ ಚಂದ್ರಾಂಗದನೇ ನಿರ್ಮಿಸಿದವನು. ಇದು ಸಹ್ಯಾದ್ರಿಖಂಡದ ಪೂರ್ವೋಕ್ತ ಶ್ಲೋಕ ದಿಂದ ನಿರ್ವಿವಾದ ಸಿದ್ಧವಾಗಿದೆ.

ಇಂಥಾ ಕುಲನಾಮುಗಳು ವ ಉಪನಾಮುಗಳು ರಾಜಕೀಯವಾಗಿಯೇ ಬಂದ ದ್ದಿದ್ದು ಶೀವಳ್ಳಿಯವರು ತಾವಾಗಿಯೇ ಇಟ್ಟುಕೊಂಡದ್ದು ಅಲ್ಲ. ಹೀಗಿರುವಾಗ ಭಟ್ಟರು 151ನೇ ಪುಟದಲ್ಲಿ "ಅಹಿಚ್ಛತ್ರದ ಬ್ರಾಮ್ಹಣರ ಕುಲಗಳ ಮೂಲ ಯಾ ಮರ್ಮವೇನು? ಎಂಬ ಕೌತುಕದ ಪ್ರಶ್ನೆ ಏಳುತ್ತದೆ. ಅದನ್ನು ಹೀಗೆ ಬಗೆಹರಿಸಬಹುದು?" ಎಂದು ಮುಂತಾದ್ದಾಗಿ ಏನು ತಮಾಷೆ ಮಾಡುತ್ತಾರೋ, ಅದು ಅವರ ಯೋಗ್ಯತೆಗೆ ಅನುಗುಣ ವಾಗಿಯೇ ಇದೆ. ವಸ್ತುತಃ ಪ್ರಶ್ನೆಯೂ ಹುಟ್ಟಿದ್ದಿಲ್ಲ. ಅದನ್ನು ಬಗೆಹರಿಸುವ ಬಗ್ಗೆ ಭಟ್ಟರಿಗೆ ಶ್ರಮವೂ ಬೇಕಾಗಿಲ್ಲ. ಎಲ್ಲವೂ ಸುಸೂತ್ರವಾಗಿ ಪ್ರಶ್ನೆ ಏಳದಂತೆ ಉತ್ತರ ಸಹ್ಯಾದ್ರಿಯ 8ನೇ ಅಧ್ಯಾಯದ ಉದಾಹೃತ ಶ್ಲೋಕಗಳಿಂದ ಬಗೆಹರಿಸಿಯೇ ಬಿಟ್ಟಿ ದ್ದಾಗಿದೆ. ಅದು ತಪ್ಪು, ಸುಳ್ಳು, ಎನ್ನಲು ಏನಾದರೂ ಕಾರಣ ತೋರಿಸಿದ್ದಾರೋ? ಅದೂ ಇಲ್ಲ. ಹಾಗೆ ಇಂಗ್ಲೀಷರು ಬರೆದಿಲ್ಲ. ಆದುದರಿಂದ ಚಾರಿತ್ರಿಕ ಬೆಂಬಲವಿಲ್ಲ ಎಂದಿಷ್ಟೇ ಅಲ್ಲದೆ ಮತ್ತೇನಿದೆ? ಮಯೂರವರ್ಮನಲ್ಲ, ಅವನ ಮಗ ಸಹ ಕುಲನಾಮ ಏರ್ಪಡಿಸಿಲ್ಲ ಎಂಬುದಕ್ಕೆ ಏನು ಕಾರಣವಿದೆ? ಹಾಗೂ ಅವರನ್ನು ಕರೆತರಿಸಲಿಲ್ಲ. ಇದಕ್ಕೆ ಏನು ರುಜುವಾತು ಇದೆ. ಇದ್ದರೆ ಬೆಳಕಿಗೆ ಬರಲಿ.

(ತು. ಪು. ಪು. 146ರಲ್ಲಿ) ಗುರುರಾಜ ಭಟ್ಟರು ಅಹಿಚ್ಛತ್ರದ ಬ್ರಾಮ್ಹಣರು ರೂಢಿಗೆ ವ್ಯತಿರಿಕ್ತವಾಗಿ ನಡೆದುಕೊಳ್ಳುವುದಕ್ಕೆ (ಮಾತೃದೇಶದ ಹೆಸರು ಬಿಟ್ಟು ನೆಲೆ ಸಿದ ಊರುಗಳ ಭಾಷಾ, ವೇಷ, ನಾಮುಗಳನ್ನು ಇಟ್ಟುಕೊಳ್ಳಲು) ಬಲವಾದ ಕಾರಣ

(ಗತ್ತು)ಗಳು ಇರಬೇಕೆಂದು ಏನು ಬರೆಯುತ್ತಾರೋ? ಅದರಲ್ಲೇ ಬಲವಾದ ಒಂದು ಗತ್ತು ಇದೆ ಎಂದು ಹೇಳಿದರೆ ತಪ್ಪಾಗದು. ಅವರ ಅಭಿಪ್ರಾಯದ ಪ್ರಕಾರ ತುಳುವದ ಮೊದಲಿನ ಬ್ರಾಹ್ಮಣರೆಂದರೆ ಸ್ಥಾನಿಕರು. 141ನೇ ಪೇಜಿನಲ್ಲಿ ಸವಿಸ್ತರ ಸ್ಥಾನಿಕರು ಎಂಬ ಶಿರೋಲೇಖನದ ಕೆಳಗೆ ಬರೆದಿರುವರು. ಸ್ಥಾನಿಕರ ಸ್ಪರ್ಧೆಯಿಂದ ತುಳುವರು ತಾವೂ ಸ್ಥಾನಿಕರಂತೆ ತುಳುವರಾಗಲು ಹವ್ಯಾಸಪಡುತ್ತಾರೆ ಎಂದು ಮುಂತಾದ್ದಾಗಿ ತಮಾಷೆ ಮಾಡುವುದೇ ಆ ಗತ್ತು. ಚಿತ್ಪಾವನರೂ ಸಹ ಭಟ್ಟರ ರೂಢಿಗೆ ವ್ಯತಿರಿಕ್ತ ವಾಗಿ ಮರಾಠೀ ಭಾಷೆಯಲ್ಲಿ ಗ್ರಾಮಗಳ ಮೇಲಿಂದ ಕುಲನಾಮಗಳನ್ನು ಇಟ್ಟುಕೊಂಡಿ ದ್ದಾರಲ್ಲ! ಹಾಗೆ ಖರಾಡೆಯವರೂ ಸಹ ನೆಲೆನಿಂತ ದೇಶದ ಗ್ರಾಮಭಾಷಾನಾಮ ಗಳನ್ನು ಇಟ್ಟುಕೊಂಡಿದ್ದಾರೆಂದು ಈ ಮೊದಲೇ ನಿರೂಪಿಸಿರುತ್ತದೆ. ಅದನ್ನು ಏಕೆ ಇವರ ರಿಸರ್ಚಿನಲ್ಲಿ ಒಳಪಡಿಸಲಿಲ್ಲ? ಚಿತ್ಪಾವನ, ಖರಾಡೆಯವರು ನಿಂದ್ಯರಲ್ಲ, ಮಾನ್ಯ ರಿದ್ದಾರೆ. (ಪು. 158ರಲ್ಲಿ ನೋಡಬೇಕು). ಶೀವಳ್ಳಿಯವರನ್ನಷ್ಟೇ ತಮಾಷೆ ಮಾಡುವು ದಿದೆ ಎನ್ನುತ್ತೀರಾ! ಒಳ್ಳೇದು. ಶಹಭಾಸ್! ನಿಮ್ಮ ವಿವೇಚನಾಶಕ್ತಿಗೆ.

(ತು. ಪು. 147–150ರಲ್ಲಿ) ಭಟ್ಟರು "ಗಂಡಸರು ಮಾತ್ರ ತುಳುದೇಶದಲ್ಲಿ ವಸಾ ಹತುಮಾಡಲಿಕ್ಕೆ ಬಂದುದರಿಂದ ಅವರು ಶೂದ್ರ ಸ್ತ್ರೀಯರನ್ನು ಮದುವೆ ಮಾಡಿ ಕೊಳ್ಳುವ ಒತ್ತಾಯವಾಯಿತು" ಎಂದು ಸಾಹೇಬರ ಅಭಿಪ್ರಾಯವನ್ನು ಬರೆಯುತ್ತಾರೆ. ಭಟ್ಟರಂತೆ ಶೀವಳ್ಳಿಯವರ ಮೇಲೆ ಮತ್ಸರಿಗಳು ಇನ್ನೂ ಬಹಳ ಮಂದಿ ಇದ್ದಾರೆ. ಅವರ ಪೈಕಿ ಕೆ. ಪಿ. ಪುರಾಣಿಕರೂ ಒಬ್ಬರು. ಅವರು ಶೀವಳ್ಳಿಯವರು ಪುನಃ ತಿರುಗಿ ಹೋಗದಂತೆ ಮಾಡಲು ಮಯೂರವರ್ಮನು ಇಲ್ಲಿಯ ಶೂದ್ರ ಸ್ತ್ರೀಯರ ಕೂಡ ವಿವಾಹ ಮಾಡಿಸಿದನು ಎನ್ನುತ್ತಾರೆ. ಇವರು ಭಟ್ಟರಂತೆ ಉತ್ತರ ಸಹ್ಯಾದ್ರಿಗೆ ಅಪ ಮಾನ ಮಾಡುವವರಲ್ಲ. ಇವರಿಗೆ ಉತ್ತರ ಸಹ್ಯಾದ್ರಿ ಮೇಲೆ ಗೌರವವಿದೆ. ತಮ್ಮ ಆತ್ಮ ಸಮರ್ಥನೆಗೆ ಸಹ್ಯಾದ್ರಿಯ ಬೆಂಬಲ ಬೇಕಾಗಿದೆ. ಆದುದರಿಂದ ಮಯೂರವರ್ಮ ಕರೆತರಿಸಿದ್ದು ಒಪ್ಪಿಗೆ ಇದೆ. ಆದರೆ ಒಂದು ಸಾರಿ ತಿರುಗಿ ಹೋದುದರಿಂದ ಪುನಃ ಹೋಗದಂತೆ ಮಾಡಲು ಸೂಕ್ತ ಉಪಾಯವೆಂದು ಕಲ್ಪಿಸಿ ಶೀವಳ್ಳಿಯವರ ಭ್ರಷ್ಟತೆ ಯನ್ನು ಸಕಾರಣ ಸ್ಥಿರಪಡಿಸಿದ್ದೇನೆಂದು ಹೆಮ್ಮೆ ಪಡುತ್ತಿದ್ದಾರೆ ಅಷ್ಟೆ. ಆದರೆ ಇದು ಸಹ್ಯಾದ್ರಿ ಉತ್ತರಖಂಡದಲ್ಲಿ ಉಕ್ತವಾಗಿಲ್ಲ. ಪ್ರತ್ಯುತ ವಿರುದ್ಧವೆಂದು ಹೇಳಬಹುದು. ಏಕೆಂದರೆ ಉತ್ತಮ ಪರಿಶುದ್ಧ ಬ್ರಾಹ್ಮಣರನ್ನು ಬೇಕೆಂದು ಬಯಸಿ ಕರೆತಂದು ಶೂದ್ರಸ್ತ್ರೀಯರ ಕೂಡ ವಿವಾಹ ಮಾಡಿಸಿ ಭ್ರಷ್ಟರನ್ನಾಗಿ ಮಾಡುತ್ತಾನೆಂದು ಹೇಳು ವುದು ವಿರುದ್ಧವಲ್ಲದೆ ಮತ್ತೇನು? ಸಹ್ಯಾದ್ರಿಯಲ್ಲಿ "ಸಪುತ್ರಪೌತ್ರಕಾನ್" ಎಂಬು ದಾಗಿ ಸಕುಟುಂಬ ಬಂದಿದ್ದಾರೆಂದು ಸ್ಪಷ್ಟ ಉಕ್ತವಾಗಿದೆ, ಅದು ಸಯುಕ್ತಿಕವಾಗಿದೆ. ವಸಾಹತು ಮಾಡಲು ಹೋಗುವವರು ಸಕುಟುಂಬ ಹೋಗುತ್ತಾರೆಂಬುದು ಸಹಜ, ಸ್ವಾಭಾವಿಕ. ಅದಕ್ಕೆ ರುಜುವಾತು ಬೇಕಾಗಿಲ್ಲ. ಬಿಟ್ಟು ಬಂದಿದ್ದಾರೆ ಎನ್ನುವುದನ್ನು ದಾಖಲೆಕೊಟ್ಟು ರುಜುವಾತು ಮಾಡಬೇಕು. ಅದನ್ನು ಮಾಡಲಿಲ್ಲ.

ಮತ್ತು (ತು. ಪೇಜು 232)ರಲ್ಲಿ ಬ್ರಾಮ್ಹಣರ ಕುಟುಂಬಗಳನ್ನು ತರಿಸಿದ ಬಗ್ಗೆ ಶಾಸನಗಳು ಗಜೇಟೀಯರ ಮೊದಲಾದವು ಅನುಕೂಲ ಇವೆ ಎನ್ನುತ್ತಾರೆ. ಅದರಲ್ಲಿ ಬ್ರಾಮ್ಹಣರ ಕುಟುಂಬ ಎಂಬ ಶಬ್ದ ಸ್ಪಷ್ಟವಿದೆ. ಭಟ್ಟರ ಪ್ರಕಾರ ತುಳುವದ 1ನೇ ವಲಸೆಗಾರರು ಸ್ಥಾನಿಕರು ಸಕುಟುಂಬ ಬಂದಿರುತ್ತಾರೆ. ಅದರಲ್ಲಿ ಸಂಶಯವಿರಲು ಸಾಧ್ಯವಿಲ್ಲ. (ಅವರು ಶೂದ್ರಸ್ತ್ರೀಯರನ್ನು ಮದುವೆಯಾಗಬಾರದು. ಅವರನ್ನು ಎತ್ತಿಹಿಡಿಯುವುದೇ ಈ ಗ್ರಂಥದ ಉದ್ದೇಶವಾಗಿದೆ) 2ನೇ ವಲಸೆಗಾರರು ಹವೀಕರು ಸಕುಟುಂಬ ಬಂದಿರುತ್ತಾರೆ. (ಅವರು ಶೂದ್ರಸ್ತ್ರೀಯರನ್ನು ಮದುವೆಯಾಗಲು ಗಂಡಸರು ಮಾತ್ರ ಬರಲಿಲ್ಲ. ಅವರನ್ನು ತೆಗಳುವ ಉದ್ದೇಶವೂ ಈ ಗ್ರಂಥಕ್ಕಿಲ್ಲ.) 3ನೇ ವಲಸೆಗಾರರು ಶೀವಳ್ಳಿಯವರು, ಇವರು ಮಾತ್ರ ಕೇವಲ ಗಂಡಸರೇ ಬಂದಿರುತ್ತಾರೆ. (ಅವರು ಶೂದ್ರಸ್ತ್ರೀಯರನ್ನು ಮದುವೆ ಮಾಡಿಕೊಳ್ಳಲಿಕ್ಕೇಬೇಕು. ಅವರನ್ನು ಕೀಳುತರವಾಗಿ ತೋರಿಸುವುದೇ ಈ ಗ್ರಂಥದ ಉದ್ದೇಶವಾಗಿದೆ.) ಆದುದರಿಂದಲೇ "3ನೇ ವಲಸೆಯಲ್ಲಿ ಬಂದ ಬ್ರಾಮ್ಹಣರು ಶೂದ್ರಸ್ತ್ರೀಯರನ್ನು ವಿವಾಹ ಆಗಲಿಲ್ಲವೆಂಬುದನ್ನು ಸಿದ್ಧಪಡಿಸುವುದು ಕಷ್ಟವಾಗಿದೆ." ಎಂದು ಗುರುರಾಜ ಭಟ್ಟರು ಬರೆಯುತ್ತಾರೆ. ಇದರಿಂದ ವಸಾಹತು ಮಾಡಲು ವಲಸೆ ಬಂದವರೆಲ್ಲಾ ಸಕುಟುಂಬ ಬಂದಿರುತ್ತಾರೆ ಎಂಬ ಒಂದು ಮಾತು ಸ್ಪಷ್ಟವಾಯಿತು. 3ನೇ ವಲಸೆಯುವರು ಮಾತ್ರ ಅಂದರೆ ಶೀವಳ್ಳಿಯವರು ಮಾತ್ರ ಗಂಡಸರು ಬಂದಿರುತ್ತಾರೆ. ಹೆಂಗಸರು ಬಂದಿಲ್ಲ ಎಂಬುದುದಕ್ಕೆ ಕಾರಣ ಕೊಡಲಿಲ್ಲ. ತಮ್ಮ ಮನಸ್ಸಮಾಧಾನಕ್ಕಾಗಿ ಕಲ್ಪಿಸಿದ ಕಟ್ಟುಕಥೆಗೆ ಕಾರಣವು ಇರಲು ಸಾಧ್ಯವೂ ಇಲ್ಲ. ತಾಲಗುಂದಕ್ಕೆ ಬಂದ ಬ್ರಾಮ್ಹಣರು ಸಕುಟುಂಬ ಬಂದಿರುತ್ತಾರೆ. 1ನೇ ವಲಸೆಯವರು ಸ್ಥಾನಿಕರು ಸಕುಟುಂಬ ಬಂದಿರುತ್ತಾರೆ. 2ನೇ ವಲಸೆಯ ಹವೀಕರು ಸಕುಟುಂಬ ಬಂದಿರುತ್ತಾರೆ. ವಲಸೆ ಬರುವವರೆಲ್ಲಾ ಸಕುಟುಂಬ ಬರುತ್ತಾರೆ. ಆದುದರಿಂದ 3ನೇ ವಲಸೆಯ ಶೀವಳ್ಳಿಯವರೂ ಸಹ ಸಕುಟುಂಬವಾಗಿಯೇ ಬಂದಿರುತ್ತಾರೆ. 3ನೇ ವಲಸೆಯವರೆಂಬ ಶೀವಳ್ಳಿಯವರ ಮೇಲೆ ಭಟ್ಟರ ದೋಷಾರೋಪಣೆ ಅನಾದಿ ಬ್ರಮ್ಹದ್ವೇಷ ಮೂಲಕವಾದುದರಿಂದ ಹೇಯವು ಅದಕ್ಕೆ ಚಿಕ್ಕಾಸು ಬೆಲೆ ಬಾಳದು. ಅಹಿಚ್ಛತ್ರದವರು ಸಕುಟುಂಬವಾಗಿ ಬಂದಿರುತ್ತಾರೆ. ತಮ್ಮ ಪಾವಿತ್ರ್ಯವನ್ನು ಕಾದುಕೊಂಡಿರುತ್ತಾರೆ. ಶೂದ್ರಾದಿಗಳನ್ನು ಮಾತ್ರವಲ್ಲದೆ ಅವರ ಸಂಪರ್ಕದಿಂದ ಪತಿತರನ್ನು ಸಹ ದೂರವಿಟ್ಟಿರುತ್ತಾರೆ. ಎಂಬುದು ಹಿಂದೆಯೇ ಶಾಸ್ತ್ರಾಧಾರದಿಂದ ಸ್ಥಿರಪಡಿಸಲಾಗಿದೆ. ಆದರೆ ಆ ಪತಿತರ ಕುರಿತು ಭಟ್ಟರ ಮನಸ್ಸು ದ್ರವೀಭೂತವಾಗಿ ಹರಿಯುತ್ತಾ ದೊಡ್ಡದೊಂದು ಹೊಳೆಯಾಗಿದೆ. ಇದೆಲ್ಲಾ ಇಂಗ್ಲೀಷರ ಕಡೆಯಿಂದ ಕಲಿತುಕೊಂಡ ಇತಿಹಾಸ ಬರೆಯುವ ಕಲೆ ಮಾತ್ರ, ತತ್ವ ಇದರಲ್ಲಿಲ್ಲ.

(ತು. ಪುಟ 148ರಲ್ಲಿ) "ಉಡುಪಿ ಹತ್ತಿರವಿರುವ ಮಟ್ಟು ಎಂಬ ಗ್ರಾಮದಲ್ಲಿ ವಾಸಿಸಿರುವ ಮಟ್ಟು ಬ್ರಾಮ್ಹಣರು ಹಿಂದಕ್ಕೆ ಮೊಗವೀರರಾಗಿದ್ದರು. ಅನಂತರ ಸೋದೆ ವಾದಿರಾಜ ಸ್ವಾಮಿಯರಿಂದ ಬ್ರಾಮ್ಹಣರಾಗಿ ಪರಿವರ್ತಿಸಲ್ಪಟ್ಟರು ಎಂದು ಬರೆದಿದೆ.

ಇದು ಸಹ ಸಂಪೂರ್ಣ ಸುಳ್ಳು. ಏಕೆಂದರೆ ಉತ್ತರ ಸಹ್ಯಾದ್ರಿ ಅಧ್ಯಾಯ 15ರಲ್ಲಿ ಮೊದಲಿನಿಂದಲೂ ಇದ್ದ ಬ್ರಾಹ್ಮಣರಿಗೆ ಶೀವಳ್ಳಿಯವರು ಬಂದ ಮೇಲೆ ಮಟ್ಟು ಗ್ರಾಮವನ್ನು ಮಯೂರವರ್ಮನು ದಾನವಾಗಿ ಕೊಟ್ಟಿದ್ದಾನೆಂಬ ಉಕ್ತಿ ಇದೆ.

"ಕುಡಾಲಂ ಪದಿಕಂ ಚೈವ ಮಟ್ಟೀ ನಾಗಾಭಿಧಂ ತಥಾ" ಎಂಬಲ್ಲಿ ಮಟ್ಟೀ ಎಂಬ ಪದವು ಈಗಿನ ಮಟ್ಟೀ ಗ್ರಾಮವನ್ನು ನಿರ್ದೇಶಿಸುತ್ತದೆ. ಮಯೂರವರ್ಮನು ಪರಶುರಾಮ ನಿರ್ಮಿತರಿಗೆ ಬ್ರಾಹ್ಮಣರೆಂದೇ ಪೂರ್ವೋಕ್ತ ಗ್ರಾಮಗಳನ್ನು ಕೊಟ್ಟಿರು ವನು-ಅಂಬಿಗರೆಂದಲ್ಲ.

ರಾಮೇಣ ನಿರ್ಮಿತಾಃ ವಿಪ್ರಾಃ ಸ್ಥಿತ್ವಾಗ್ರಾಮ ಚತುಷ್ಟಯೀ |
ಗಾಯತ್ರೀ ಜಪಮಾತ್ರೇಣ ಬ್ರಾಹ್ಮಣಾ ಇತಿ ತದ್ವಿದುಃ |

ಎಂಬ ಸಹ್ಯಾದ್ರಿಖಂಡದ ಶ್ಲೋಕದಲ್ಲಿ ಬ್ರಾಹ್ಮಣರೆಂದೂ, ಪರಶುರಾಮ ನಿರ್ಮಿತರೆಂದೂ, ಗಾಯತ್ರೀ ಜಪಮಾಡುತ್ತಾ ಇರುತ್ತಿದ್ದುದರಿಂದ "ಕುರ್ಯಾದನ್ಯನ್ನವಾ ಕುರ್ಯಾ ನ್ಮೈತ್ರೋ ಬ್ರಾಹ್ಮಣ ಉಚ್ಯತೇ" ಎಂಬ ಮನುಸ್ಮೃತಿ ಪ್ರಕಾರ ಬ್ರಾಹ್ಮಣರೇ ಆಗಿದ್ದರೆಂದೂ ಉಕ್ತವಾಗಿದೆ. ಮಟ್ಟನವರು ಮೊದಲಿನಿಂದಲೂ ಬ್ರಾಹ್ಮಣರೇ ಇದ್ದಾರೆ. ಜನರ ಕಣ್ಣಿಗೆ ಮಣ್ಣು ಎರಚುವುದು ಬೇಡ. ನಂತರ ಶ್ರೀಸೋದೆ ವಾದಿರಾಜಸ್ವಾಮಿ ಗಳವರಿಂದ ಮಾಧ್ವದೀಕ್ಷಾ ಪಡೆದು ಮಾಧ್ವರಾದರು. ಇಷ್ಟು ಮಾತ್ರ ನಡೆದದೆ ಯಲ್ಲದೆ ಶ್ರೀಸೋದೆ ವಾದಿರಾಜರಿಂದಲೇ ಬ್ರಾಹ್ಮಣರಾದುದಲ್ಲ. ಇದರ ವಿರುದ್ಧ ಯಾವ ದಾಖಲೆಯನ್ನೂ ಹಾಜರು ಪಡಿಸಲಿಲ್ಲ, ಸಿದ್ಧಪಡಿಸಲಿಲ್ಲ. ದೇವಕಾರಿ ಸ್ಥಾನಿಕ ರನ್ನು ಶೀವಳ್ಳಿಯವರು ಬರುವುದಕ್ಕಿಂತ ಮೊದಲಿನ ತುಳುವದ ಬ್ರಾಹ್ಮಣರನ್ನು ಮಾಡುವ ಸಂಚುಹೂಡಿ ಪೂರ್ವದ ತುಳುವದ ಬ್ರಾಹ್ಮಣರನ್ನು ಜನರ ಲಕ್ಷ್ಯದಿಂದ ಹಾರಿಸಲು ಶ್ರೀವಾದಿರಾಜರ ನಂತರದವರೆಂದು ಅಸತ್ಯ ಸಾಧನೆ ಮಾಡುತ್ತಾರೆ. ಶೀವಳ್ಳಿಯವರು ಬಂದ ಮೇಲೆ ದೇವಕಾರಿ ಸ್ಥಾನಿಕರು ಹುಟ್ಟಿಬಂದವರೆಂದು ಬರೆದಿರುವ ಪಾಟಾಳಿ ಉತ್ಪತ್ತಿಯನ್ನು ಅಲ್ಲಗಳೆಯುತ್ತಾರೆ. ಇದೆಲ್ಲಾ P.H.D.ಗಳ ಇತಿಹಾಸ ಬರೆಯುವ ಕಲೆಗಳ ನಮೂನೆ, ಥರ್ಸ್ಟನ್ ಬರೆದನು ಎಂಬುದರಲ್ಲಿ ಅರ್ಥವಿಲ್ಲ. ಭಟ್ಟರು ತಿಳಿದಂತೆ ಸಾಹೇಬರು ಬರೆದರೆ ಇತಿಹಾಸ, ಚರಿತ್ರೆ, ಆದೀತು—ಸತ್ಯವಾಗುವುದಿಲ್ಲ. ಸಾಹೇಬರು ವಸ್ತುಸ್ಥಿತಿ ಬರೆಯಲು ಬಂದವರಲ್ಲ. ಹಾಗೂ ವಸ್ತುಸ್ಥಿತಿ ಬರೆಯಲೂ ಇಲ್ಲ. ಇದ್ದದ್ದು ಇದ್ದ ಹಾಗೆ ಬರೆದಿದ್ದರೆ ಅವರ ಮಹತ್ವವಾದರೂ ಏನು ಪ್ರಾಪ್ತ ವಾಗುತ್ತಿತ್ತು? ನಿಮಗೆ ಇತಿಹಾಸ ಗೊತ್ತಿಲ್ಲ, ಭೂಗೋಳ ಗೊತ್ತಿಲ್ಲ, ಆ ಕಲೆನೇ ತಿಳಿಯದು. ಇತ್ಯಾದಿ ನಮ್ಮನ್ನು ತೆಗಳಿ ಎಲ್ಲಾ ಅಸ್ತವ್ಯಸ್ತ, ಅಸಂಬದ್ಧ ಬರೆದಿರುತ್ತಾ ರೆಂಬುದು ಈಗ ಎಲ್ಲರಿಗೂ ಭಾರತೀಯರಿಗೆ ತಿಳಿಯಹತ್ತಿದೆ. ಬಹು ಸಂಖ್ಯಾಕ ಬ್ರಾಹ್ಮ ಣೇತರರು ಬ್ರಾಹ್ಮಣರ ಮಾರ್ಗದರ್ಶನದಲ್ಲಿ ಇರುತ್ತಿದ್ದು ಅವರನ್ನು ಗುರುಗಳೆಂದು ಭಾವಿಸುತ್ತಾರಲ್ಲಾ, ಅದನ್ನು ನೋಡಿ ಅಸೂಯೆಯಿಂದ ತಮ್ಮ ಮಾರ್ಗದರ್ಶನದಲ್ಲಿ

ತರಬೇಕೆಂದು ಬ್ರಾಹ್ಮಣರ ವಿರುದ್ಧ ಬಂಡು ಎಬ್ಬಿಸುವ ಸಂಚು ಹೂಡಿ ಬರೆದದ್ದಾಗಿದೆ. ಅದು ಸಫಲವಾದದ್ದೂ ಸಹ ಈಗ ಕಂಡುಬರುತ್ತಾ ಇದೆ. ಹೀಗಿರುವಾಗ ಇಂಥಾ ಸಾಹೇಬರು ಬರೆದ ಗ್ರಂಥಗಳೇ ಇತಿಹಾಸ, ಚರಿತ್ರೆ ಎಂದು ಗ್ರಹಿಸಿ ತಮ್ಮ ಪೂರ್ವಜರನ್ನೂ ಅವರು ಬರೆದ ಗ್ರಂಥಗಳನ್ನೂ ಲಂಗಲಗಾಮು ಇಲ್ಲದೆ ನಿಂದಿಸುವ ಈ ಲೇಖಕರನ್ನು ಸಂಶೋಧಕರೆನ್ನಬೇಕೇ? ಅಥವಾ ಇಂಗ್ಲೀಷಿನಲ್ಲಿದ್ದುದನ್ನು ಕನ್ನಡದಲ್ಲಿ ಟ್ರಾನ್ಸ್‌ಲೇಶನ್ ಮಾಡುವವರೆನ್ನಬೇಕೇ? ಇಂಗ್ಲೀಷರು ಬರೆಯುವ ಅಸಂಬದ್ಧ ಪ್ರಲಾಪಗಳಿಗೆ ಅವರ ತಲೆಬುರುಡೆಯೇ ಆಧಾರವಲ್ಲದೆ ಬೇರೆ ಏನಿದೆ? ಪ್ರಾಚೀನ ಶಾಸನಗಳೆಂದು ಏನು ತೋರಿಸುತ್ತಾರೋ? ಅದೆಲ್ಲಾ ಬತಾವಣಿ. ಸತ್ಯಶಂಶೋಧನೆಯಲ್ಲ. ಎಂದು ಡಾ|| ಮೌಲಾನಾ ನಾಡವೀಯರ ವಾಕ್ಯೋದಾಹರಣಪೂರ್ವಕ ಹಿಂದೆ ಬರೆದಿದೆ. "ಇರಬೇಕು." "ಇರಬಹುದು" "ಇದ್ದೀತು" ಎಂದು ಕೆಲವು ಸಾರೆ ಬರೆದು ಆ ಮೇಲೆ "ಇದೆ" ಎಂದು ಸಿದ್ಧಾಂತ ಮಾಡುವುದು, "ಇದಮಿತ್ಥಂ" ಎಂಬ ದೃಢವಾಕ್ಯ ಒಂದನ್ನೂ ಯಾವ ವಿಷಯದಲ್ಲಿಯೂ ಬರೆಯದಿರುವುದು, ಕೇವಲ ತಮ್ಮ ಬಯಕೆಗಳನ್ನೆಲ್ಲಾ ಸವ್ಯಾಪಸವ್ಯಮಾಡಿ ಬರೆದಿಟ್ಟು ಅದನ್ನೆಲ್ಲಾ ಇತಿಹಾಸವೆಂದು ಪ್ರಚಾರ ಮಾಡುವುದು ಇದೀಗ ನಡೆದಿದೆ. ಇದನ್ನು ಇತಿಹಾಸವೆನ್ನಬೇಕೇ? ಅಥವಾ ಜನರನ್ನು ತಪ್ಪು ಮಾರ್ಗಕ್ಕೊಯ್ಯುವುದು ಎನ್ನಬೇಕೇ? ಜನರೇ ನಿರ್ಧರಿಸಲಿ. ಅಂತೂ ಮಟ್ಟಿನವರು ಮೊದಲಿನಿಂದಲೂ ಬ್ರಾಹ್ಮಣರಾಗಿದ್ದರೆಂದು ಸಹ್ಯಾದ್ರಿಯ ಪೂರ್ವೋಕ್ತ ವಾಕ್ಯಾಧಾರದಿಂದ ಸಿದ್ಧವಾಗಿದೆ.

ಪ್ರಕೃತ ಶೀವಳ್ಳಿಯವರು ಪುತ್ರಪೌತ್ರಾದಿ ಸಹಿತ ಸಕುಟುಂಬ ಬಂದಿದ್ದಾರೆ. ಅವರಿಗೆ ಗ್ರಾಮಗಳನ್ನೂ ಅದರಲ್ಲಿ ಅಗ್ರಹಾರಗಳನ್ನೂ ಮಾಡಿ ನೆಲೆಸಿದ್ದಾಗಿದೆ. ಅವರು ವೇದಾಧ್ಯಯನ, ಸದಾಚಾರ, ಶಾಸ್ತ್ರಾಭ್ಯಾಸ ಮಾಡುತ್ತಾ ಉತ್ತಮ ಗುಣಸಂಪನ್ನರಾಗಿ, ಕರ್ಮನಿಷ್ಟರಾಗಿ ಶುಚಿರ್ಭೂತರಾಗಿದ್ದರು.

ಏತೇಷು ಗ್ರಾಮ ಮುಖ್ಯೇಷು ಸ್ಥಿತ್ವಾ ಬ್ರಾಹ್ಮಣ ಪುಂಗವಾಃ |
ಸಂತೋಷಮಾವಹನ್ ರಾಜ್ಞೆ ವೇದಾಧ್ಯಯನ ಪಾರಗಾಃ ||
ಶಿವಪೂಜಾಪರಾ ನಿತ್ಯಂ ವಿಷ್ಣು ಪೂಜಾಪರಾಯಣಾಃ |
ಮಹಾಗಣಪತೇಶ್ಚಾಪಿ ಪ್ರಸಾದಾಕಾಂಕ್ಷಿಣಸ್ತಥಾ ||
ಷಟ್ಕರ್ಮ ನಿರತಾಃ ಶಾಂತಾಃ ಸರ್ವಶಾಸ್ತ್ರೇಷುಕೋವಿದಾಃ |
ಮಂತ್ರಶಾಸ್ತ್ರೇಷು ನಿರತಾಃ ಜ್ಯೋತಿಃಶಾಸ್ತ್ರವಿಶಾರದಾಃ ||
ಪಂಚಯಜ್ಞಪರಾಃ ನಿತ್ಯಂ ಸಚ್ಚರಿತ್ರಾಃ ದಯಾಲವಃ |
ಶ್ರೌತಸ್ಮಾರ್ತಸದಾಚಾರನಿಷ್ಠಾಃ ಸತ್ಕರ್ಮತತ್ಪರಾಃ ||
ವರ್ಣಾಶ್ರಮೋದಿತಾನ್ ಧರ್ಮಾನ್ ನಿತ್ಯಂ ಚಕ್ರುರತಂದ್ರಿತಾಃ ||

ಹೀಗೆ ಉತ್ತರ ಸಹ್ಯಾದ್ರಿಖಂಡ 8ನೇ ಅಧ್ಯಾಯದ ಶ್ಲೋಕಗಳನ್ನೂ ಪ್ರಕರಣದ ಆರಂಭದಲ್ಲಿ ಉದಾಹರಿಸಿರುವ ಶ್ಲೋಕಗಳನ್ನು ಸಹಿತ 7, 8ನೇ ಅಧ್ಯಾಯಗಳನ್ನು,

ಹಿಂದಿನ ದಾಖಲೆಯೆಂದು, ಎವಿಡೆನ್ಸ್ ಎಂದು, ಮುಂದಿಡುತ್ತೇವೆ. ಶ್ರೀವೇದವ್ಯಾಸರು ಬರೆಯಲಿ, ಮತ್ತೆ ಬೇರೆ ಯಾರೇ ಬರೆಯಲಿ, ಬಹುಕಾಲದ ಹಿಂದಿನ ಲೇಖವೆಂಬ ದಾಖಲೆ, ಆಸೇತು ಹಿಮಾಚಲ ಪ್ರಚಲಿತವಿರುವ ಗ್ರಂಥ, ಸರ್ವಸಾಧಾರಣ ಸಕಲ ಭಾರತೀಯರು ಪ್ರಮಾಣವೆಂದು ಭಾವಿಸುವ ಪರಮಪೂಜ್ಯ ಪುರಾಣ ಗ್ರಂಥ, ಸಹ್ಯಾದ್ರಿ ಖಂಡ. ಅದರ ವಾಕ್ಯಗಳ ಆಧಾರದ ಮೇಲೆಯೇ ನಮ್ಮ ವಾದ ಮುಂದು ಮಾಡು ತ್ತೇವೆ. ಎದಿರುದಾರರು ಶೀವಳ್ಳಿಯವರು ಬ್ರಮ್ಹಚಾರಿಗಳಾಗಿಯೇ ವ ಹೆಂಡಂದಿರನ್ನು ಹಾದಿಪಾಲು ಮಾಡಿ ಗಂಡಸರು ಮಾತ್ರ ತುಳುವದಲ್ಲಿ ವಸಾಹತು ಮಾಡಲು ಬಂದರು ಎಂಬುದಕ್ಕೆ ಏನು ಎವಿಡೆನ್ಸ್ (ದಾಖಲೆ) ಹಾಜರು ಮಾಡುತ್ತಾರೆ ನೋಡೋಣ. ಇದುವರೇಗೆ ಸಹ್ಯಾದ್ರಿಖಂಡದ ಪೂರ್ವೋಕ್ತ ವಾಕ್ಯಗಳ ಅರ್ಥವನ್ನು ಸಪ್ರಮಾಣ ನಿರಾಕರಿಸಿದವರಿಲ್ಲ. ನಿರಾಕೃತವಾಗಿ ಹೋಗಿದೆ, ಹೋಗಲಿ, ಎಂದು ಅಪೇಕ್ಷೆ ಪಡು ವವರು ಮಾತ್ರ ಇದ್ದಾರೆ.

(ತು. ಪು. 106ರಲ್ಲಿ) ಕೋಟೀಶ್ವರದಲ್ಲಿದ್ದವರನ್ನು ಮುದ್ರೆ ಹಾಕಿ ದೀಕ್ಷಾ ಕೊಟ್ಟು ವೈಷ್ಣವರನ್ನಾಗಿಸಿದ ಶ್ರೀಸೋದೇ ವಾದಿರಾಜರ ಕುರಿತು ಉಲ್ಲೇಖವಿರುವುದ ರಿಂದ 16ನೇ ಶತಕದಿಂದೀಚೆಗೆ ಬರೆದದ್ದು ಸಹ್ಯಾದ್ರಿ ಉತ್ತರಖಂಡವೆಂದಿದೆ. ಈ ಬರೆಹ ದಲ್ಲಿ ಏನೂ ಅರ್ಥವಿಲ್ಲ. ಏಕೆಂದರೆ ಉತ್ತರ ಸಹ್ಯಾದ್ರಿಯ 12ನೇ ಅಧ್ಯಾಯದಲ್ಲಿ ಕೋಟೀಶ್ವರವವರ ಕುರಿತು ವಿಚಾರವಿದೆ. ಈಗ ಬಸರೂರು ಎಂಬ ಕುಂದಾಪುರದ ಹತ್ತಿರವಿರುವ ಶಹರದಲ್ಲಿ ಬಸರೂರು ಎಂಬ ಹೆಸರು ಬರಲಿಕ್ಕೆ ಕಾರಣನಾದ ವಸು ಚಕ್ರ ವರ್ತಿ ಎಂಬ ಪ್ರಭಾವಶಾಲೀ ರಾಜನಿದ್ದನು. ಆ ಕಾಲದಲ್ಲಿ ಕೋಟದವರಿಗೂ, ಕೋಟೀ ಶ್ವರದವರಿಗೂ ತಮ್ಮ ಸ್ಥಳದ ಸಮ್ಮಂಧವಾಗಿ ತಂಟೆ ಉತ್ಪನ್ನವಾಯಿತು. ಅದು ರಾಜನ ಮುಂದೆ ಶೀರ್ವಾನಿಸುವಾಗ ಕೋಟೀಶ್ವರದವರು ರಾಜನ ಮುಂದೆ ಸುಳ್ಳು ಹೇಳಿ ಮೋಸಗೊಳಿಸಿದರೆಂದು ರಾಜನು ಸಿಟ್ಟಾಗಿ ಅವರ ಗ್ರಾಮ ಕಸಿದುಕೊಂಡು ಕೋಟೀ ಶ್ವರದವರನ್ನು ಹೊರ ಹಾಕಿದನು. ಸಮುದ್ರ ತೀರದಲ್ಲಿದ್ದುಕೊಂಡು 6 ತಿಂಗಳು ಕಷ್ಟ ಪಟ್ಟರು. ಆಗ ಒಂದು ದಿವಸ ಒಬ್ಬ ಮಹಾ ಮುನಿಯು ಬಂದನು. ಆಗ ಆತನ ಅನು ಗ್ರಹದಿಂದ ಸುಳ್ಳು ಹೇಳಿದ ಮೂಲಕ ಪ್ರಾಪ್ತ ಪಾಪದಿಂದ ಮುಕ್ತರಾಗಿ ರಾಜನ ಸಮ್ಮತಿ ಯಿಂದ ಪುನಃ ಅದೇ ಗ್ರಾಮದಲ್ಲಿ ವಾಸಮಾಡ ಹತ್ತಿದರು ಎಂಬ ಆಖ್ಯಾಯಿಕಾ 12ನೇ ಅಧ್ಯಾಯದಲ್ಲಿದೆ. ಈ ಆಖ್ಯಾಯಿಕೆಯಲ್ಲಿ ಕೋಟೀಶ್ವರದವರಿಗೆ ಅನುಗ್ರಹಮಾಡಿ ಉದ್ಧಾರಮಾಡಿದ ಯತಿವರ್ಯರು ಸೋದೆ ಶ್ರೀವಾದಿರಾಜರೆಂದು ಗುರುರಾಜ ಭಟ್ಟರ ಅಭಿಪ್ರಾಯವಾಗಿದೆ. ಆದರೆ ಅವರ ಆ ಅಭಿಪ್ರಾಯ ಸುಳ್ಳು ಇದೆ. ಸೋದೆ ಶ್ರೀವಾದಿ ರಾಜರು ಬಸುರೂರಿನ ವಸುರಾಜನ ಕಾಲದವರಲ್ಲ.

(ತು. ಪು. ಪು. 102ರಲ್ಲಿ) ಆ ವಸುರಾಜನು ಆಳುಪರ ಕುಲಕ್ಕೆ ಸೇರಿದ ವಿಬುಧ ವಸುರಾಜನೆಂದೂ ಕ್ರಿ. ಶ. 1236ರಿಂದ 1254ರ ವರೆಗೆ ಅಧಿಕಾರದಲ್ಲಿದ್ದನೆಂದೂ ಬರೆದಿದೆ. ಆ ಕಾಲದಲ್ಲಿ ಶ್ರೀಮಧ್ವಾಚಾರ್ಯರೇ ಒಂದು ವೇಳೆ ಇದ್ದಿರಬಹುದಲ್ಲದೆ

ಸೋದೆ ಶ್ರೀವಾದಿರಾಜರು ಸರ್ವಥಾ ಇರಲು ಸಾಧ್ಯವಿಲ್ಲ. ಆದುದರಿಂದ ಭಟ್ಟರ ಕಲ್ಪನೆ ತಪ್ಪು. ನಿಜವಾಗಿ ವಿಬುಧವಸುವೇ ಪುರಾಣದಲ್ಲಿಯ ವಸು ಚಕ್ರವರ್ತಿ ಎಂಬುದೂ ಸಿದ್ಧವಾಗುವುದಿಲ್ಲ. ಭಟ್ಟರೇ ಬರೆಯುತ್ತಾರೆ—"ಚರಿತ್ರೆಯ ಪುಟಗಳನ್ನು ಮಗುಚಿದರೆ ಇವನಾರೆಂದು ತಿಳಿದುಬರುವುದಿಲ್ಲ. ನಮ್ಮ ನಾಡಿನ ಅಂಥ ಅರಸನಿದ್ದರೆ ಅಲುಪ ಕುಲಕ್ಕೆ ಸೇರಿದ ವಿಬುಧವಸು" ಎಂತ. ಅಂದಮೇಲೆ ಪುರಾಣದ ವಸು ಚಕ್ರವರ್ತಿ ಅದಕ್ಕಿಂತಲೂ ಹಿಂದಿನವನಾಗುತ್ತಾ ಆಗ ಮಧ್ವಾಚಾರ್ಯರ ಅವತಾರ ಸಹ ಆಗಲಿಲ್ಲ. ಆ ಕಾಲದ ಭಾಗವತ ಸಂಪ್ರದಾಯದ ವೈಷ್ಣವ ಯತಿವರ್ಯರೊಬ್ಬರು ಕೋಟೇಶ್ವರದವರಿಗೆ ಅನುಗ್ರಹ ಮಾಡಿರಬೇಕು. ಉಡುಪಿಯಲ್ಲಿ ಶ್ರೀಶಂಕರಾಚಾರ್ಯರ ನಂತರವೇ ಅವರ ಶಿಷ್ಯ ಹಸ್ತಾಮಲಕರಿಂದ ವೈಷ್ಣವ ಮಠ, ವೈಷ್ಣವ ಸನ್ಯಾಸಿಗಳು ಆಗಿದ್ದಾರೆ. ಅಚ್ಯುತ ಪ್ರೇಕ್ಷಾಚಾರ್ಯರ ಪರಂಪರೆಯಲ್ಲಿ ಪೂರ್ವದ ಯತಿಗಳನೇಕರು ಅನಂತೇಶ ಸಮೀಪದಲ್ಲಿ ತಪಸ್ಸು ಮಾಡುತ್ತಾ ಇದ್ದ ಉಲ್ಲೇಖನ ಸಹ್ಯಾದ್ರಿಯಲ್ಲಿ ಕಾಣುತ್ತದೆ. ಅವರಲ್ಲೊಬ್ಬರು ಕೋಟೇಶ್ವರದವರ ಕಷ್ಟ ಪರಿಹಾರ ಮಾಡಿದವರು ಆಗಿರಬೇಕು. ಶ್ರೀವಾದಿರಾಜರು ಆ ಕಾಲದಲ್ಲಿರಲು ಸಾಧ್ಯವಿಲ್ಲ. ಭಾಗವತ ಸಂಪ್ರದಾಯದ ಆ ಕೋಟೇಶ್ವರದವರನ್ನು ವಾದಿರಾಜರ ಕಾಲದಲ್ಲಿ ಸೋದೆ ಶ್ರೀವಾದಿರಾಜರು ಮಾಧ್ವರನ್ನು ಮಾಡಿದರು. ಈ ಎರಡು ಕಥೆಗಳನ್ನು ಒಟ್ಟು ಕೂಡಿಸಿ ಸಹ್ಯಾದ್ರಿ ಉತ್ತರಖಂಡಕ್ಕೆ ಅಪ್ರಾಮಾಣ್ಯ ಉಪಪಾದನೆ ಮಾಡುವುದು ತರವಲ್ಲ. ಮತ್ತು

> ತಪ್ತಮುದ್ರಾಂಕಿತಂ ಕೃತ್ವಾ ಮತಂ ವೇದ್ಯಂ ಹರಾಭಿಧಂ |
> ತಥಾಷ್ಟಾಕ್ಷರ ಮಂತ್ರಂಚ ವಿಷ್ಣುನಾಮಾನ್ವಿತಂ ಶುಭಂ |

ಎಂಬ ಶ್ಲೋಕದಿಂದ ಸಹ ಆ ಯತೀಶ್ವರರು ಭಾಗವತ ಸಂಪ್ರದಾಯದವರು ಎಂದು ತಿಳಿಯಬಹುದು. ಈ ಶ್ಲೋಕದಲ್ಲಿ ತಪ್ತಮುದ್ರಾಧಾರಣ ಮಾಡುವುದು, ಹಾಗೂ ಅಷ್ಟಾಕ್ಷರ ಮಂತ್ರಜಪ ಮಾಡುವುದು ಉಕ್ತವಾಗಿದೆ. ಇದು ಈಗ ಮಾಧ್ವರಲ್ಲಿ ಪ್ರಚಾರದಲ್ಲಿರುವುದರಿಂದ ಮಾಧ್ವರೇನೋ? ಎಂಬ ಸಂಶಯ ಬರುವುದು ಸಹಜವಿದೆ. ಆದರೂ ಮಾಧ್ವಮತ ಪ್ರಚಾರ, ಪ್ರವೃತ್ತಿಗಿಂತ ಪೂರ್ವದಲ್ಲಿ ಸಹ ಇತ್ತೆಂದು ಭಟ್ಟರು ಉದಾಹರಿಸಿದ ಶಂಕರ ವಿಜಯದ ವಾಕ್ಯದಿಂದ ಸಿದ್ಧವಾಗುತ್ತದೆ. ಸದರಿ ವಾಕ್ಯವು "ಹಸ್ತಾಮಲಕಸ್ತು ಭೂಮಧ್ಯಾತ್ ಪಶ್ಚಿಮಖಂಡ ದಿಗ್ವಿಜಯಂ ಕೃತ್ವಾ ಪಂಚ ಮುದ್ರಾಂಕ ವಿರಾಜಿತಾತ್ ಭಗವದಷ್ಟಾಕ್ಷರ ಮಂತ್ರ ಜಪಾಸಕಾನ್ ಕಾಂಶ್ಚಿತ್ ಬ್ರಾಹ್ಮಣಾನ್ ಕೃತ್ವಾ" ಹೀಗೆ ಇದೆ. ಇದರಲ್ಲಿ ಹಸ್ತಾಮಲಕರು ಬ್ರಾಹ್ಮಣರಿಗೆ ಪಂಚ ಮುದ್ರಾಧಾರಣೆ ಮಾಡಿಸಿ ಅಷ್ಟಾಕ್ಷರ ಮಂತ್ರ ಉಪದೇಶ ಮಾಡಿದರು ಅಂತ ಹೇಳಿದೆ ಮತ್ತು ಸದರಿ ಶ್ಲೋಕದ ಎರಡನೇ ಪಾದ "ಮತಂ ವೇದ್ಯಂ ಹರಾಭಿಧಂ" ಹೀಗೆ ಇದೆ. ಇದರ ಅರ್ಥ ತಿದ್ದದೆ ಸರಿಯಾಗಿ ಆಗುವುದಿಲ್ಲ. ಹರಾಭಿಧಂ ಎಂಬ ಪದಕ್ಕೆ ಹರ ಎಂದು ಹೆಸರುಳ್ಳ ಮತವೆಂದರೆ ಅಂಥಾ ಮತವೇ ಇರುವುದಿಲ್ಲ. ಹರನ ಹೆಸರುಳ್ಳ ಮತವೆಂದರೆ

ಶೈವಮತ, ಪಾಶುಪತ ಮತವೆಂದು ಅರ್ಥವಾಗುತ್ತಾ ಹಿಂದಿನ 41ನೇ ಶ್ಲೋಕದಲ್ಲಿ ಹೇಳಿದ "ಲಲಾಟೇ ಚೋರ್ಧ್ವ ಪುಂಡ್ರಕಂ" ಎಂಬ ಪಾದದಿಂದ ತೋರಿಸಿದ ಊರ್ಧ್ವ ಪುಂಡ್ರವು ವಿರುದ್ಧವಾಗುತ್ತದೆ. ಆದುದರಿಂದ ಮತ ಎಂಬ ಪದವನ್ನು ಮಂತ್ರವೆಂದು ತಿದ್ದಿದರೆ ಹರನ ಹೆಸರುಳ್ಳ ಶಿವಪಂಚಾಕ್ಷರ ಮಂತ್ರವೆಂದು ಅರ್ಥವಾಗುತ್ತದೆ. "ಋಷಿಶ್ಚ ವಾಮದೇವಾಖ್ಯಃ" ಎಂಬ 49ನೇ ಶ್ಲೋಕದ ವಾಮದೇವ ಋಷಿಯ ಮಂತ್ರ ಶಿವ ಪಂಚಾಕ್ಷರವೇ ಸರಿ. ಹಾಗೆ ಅರ್ಥ ಮಾಡಿದರೆ 48ನೇ ಶ್ಲೋಕದ "ತಥಾಷ್ಟಾಕ್ಷರ ಮಂತ್ರಂಚ" ಎಂಬ ಪಾದದಿಂದ ಹೇಳಲ್ಪಡುವ ಶಿವಪಂಚಾಕ್ಷರ ಸಮಾನವಾಗಿ ಅಷ್ಟಾಕ್ಷರ ಮಂತ್ರ ಜಪ ಮಾಡುವ ಪದ್ಧತಿ ಮಾಧ್ವಸಂಪ್ರದಾಯವಲ್ಲ. ಅಥವಾ ಮತವೆಂಬ ಪದ ವನ್ನು ಮಂತ್ರವೆಂದು ತಿದ್ದದೆ "ಹರಾಭಿಧಂ" ಎಂಬಲ್ಲಿ "ಹರಾಭಿದಂ" ಎಂಬುದಾಗಿ ತಿದ್ದಿ ದರೆ ಹರಿಹರಾಭೇದ ಮತವಾಗಿ, ಅದ್ವೈತ ಮತವಾಗುತ್ತದೆ. ಮಧ್ವಮತವಾಗುವುದಿಲ್ಲ. ಮತ್ತು 51ನೇ ಶ್ಲೋಕದಲ್ಲಿ, ಕಂಠದಲ್ಲಿ ತುಳಸೀಮಾಲೆ, ಹಣೆಯಲ್ಲಿ ಊರ್ಧ್ವಪುಂಡ್ರ, ಮುಖದಲ್ಲಿ ಪಂಚಾಕ್ಷರಮಂತ್ರ ಜಪ; ಹೀಗಿದ್ದವನು ಶ್ರೀವಿಷ್ಣುವೇ ಸರಿ ಎಂದು ಹೇಳುವ ಮಾತು ಸಹ ಮಧ್ವಮತಕ್ಕೆ ಅನ್ವಯಿಸುವುದಿಲ್ಲ. ಅಂತೂ ಒಂದು ವಸುರಾಜನ ಕಾಲ ದಲ್ಲಿ ಸೋದೆ ಶ್ರೀವಾದಿರಾಜರು ಇರಲಿಲ್ಲ. ಎರಡು ಶಿವಪಂಚಾಕ್ಷರ ಸಮಾನವಾಗಿ ನಾರಾಯಣ ಅಷ್ಟಾಕ್ಷರ ಮಂತ್ರೋಪದೇಶ ಮತ್ತು ಹರಿಹರಾಭೇದೋಪದೇಶ, ಹಾಗೂ ಕಂಠದಲ್ಲಿ ತುಳಸೀಮಾಲೆ, ಹಣೆಯಲ್ಲಿ ಊರ್ಧ್ವಪುಂಡ್ರ, ಮುಖದಲ್ಲಿ ಪಂಚಾಕ್ಷರಿಜಪ, ಶ್ರೀವಾದಿರಾಜ ಸಂಪ್ರದಾಯವಲ್ಲ. ಇದು ಪಂಚಾಯತನ ಪೂಜಾ ಮಾಡುವವರ ಸಂಪ್ರದಾಯ. ಆದುದರಿಂದ ಕೋಟೇಶ್ವರದವರನ್ನು ವಸುರಾಜನ ಕೋಪದಿಂದ ಪಾರು ಮಾಡಿದವರು ಸೋದೆ ಶ್ರೀವಾದಿರಾಜರಲ್ಲ, ಅಚ್ಯುತ ಪ್ರೇಕ್ಷಾಚಾರ್ಯರ ಪರಂಪರೆಯುಲ್ಲಿದ್ದ ಪೂರ್ವಜರು. ಇದರಲ್ಲಿ ಇನ್ನು ಸಂಶಯವಿರಲಾರದು. ಹಾಗಾದರೆ "ಅಂತೆಯುಗೆ ಮಾಧ್ವಮತ ಪ್ರಚಂಡಂ" ಎಂಬ 41ನೇ ಶ್ಲೋಕದ ಗತಿ ಏನು? ಎಂಬ ಪ್ರಶ್ನೆ ಉತ್ಪನ್ನವಾಗುತ್ತದೆ. ಅದರಲ್ಲಿ ಸ್ಪಷ್ಟವಾಗಿ ಮಾಧ್ವಮತದ ಉಲ್ಲೇಖವಿದೆಯಲ್ಲಾ ಎಂದರೆ 41, 42, 43, ಈ ಮೂರು ಶ್ಲೋಕಗಳು ಪ್ರಕ್ಷಿಪ್ತಗಳು. ಇತ್ತೀಚೆಗೆ ಸೋದೆ ಶ್ರೀವಾದಿರಾಜರು ಕೋಟೇಶ್ವರದವರನ್ನು ಮಾಧ್ವರನ್ನಾಗಿ ಮಾಡಿದ ಬಳಿಕ ಹಿಂದಿನ ಇತಿಹಾಸ ಮರೆತಿದ್ದುದರಿಂದ ವ ಮಧ್ವಮತಾಪಹಾಸಕ್ಕಾಗಿ ಬರೆದು ಸೇರಿಸಿದ್ದು. ಏಕೆಂದರೆ ಆ ಮೂರು ಶ್ಲೋಕಗಳು ಇಲ್ಲದೇನೇ 41ನೇ ಶ್ಲೋಕದ ಅನ್ವಯವಾಗುತ್ತದೆ. ಅಂದರೆ 41ನೇ ಶ್ಲೋಕದ ಪೂರ್ವಾರ್ಧದ ನಂತರ 3 ಶ್ಲೋಕಗಳು ಬೇರೆ ಛಂದಸ್ಸಿನವು ಇರುತ್ತಿದ್ದು ಪುನಶ್ಚ 41ನೇ ಶ್ಲೋಕದ ಉತ್ತರಾರ್ಧವಿದೆ.

ತತೋ ದೂರೆ ಸಮಾಯಾಂತಂ ಅಹಸ್ಕರ ಸಮದ್ಯುತಿಂ || ೪೦ ||

ಊರ್ಧ್ವಪುಂಡ್ರಾಂಕಿತಂ ಶಾಂತಂ ಲಲಾಟೇ ಚೋರ್ಧ್ವಪುಂಡ್ರಕಂ |
ಆಮೂಲ ಮುದ್ರಾಂಕಿತ ಬಾಹುದಂಡಂ ಮಧ್ಯೇ ಸಮಾವೇಶಿತ ಚೈಲಖಂಡಂ || ೪೧ ||

ವಾಮೆಕರೆ ಪ್ರೊದ್ಗತವೇಣುದಂಡಂ ಅಂತೆಯುಗೆ ಮಾಧ್ವಮತ ಪ್ರಚಂಡಂ |
ಪುನಶ್ಚ ಮುದ್ರಾಂಕಿತ ಸರ್ವಗಾತ್ರಂ ವಾಮೆಕೆರೆ ಸಂಸ್ಥಿತ ನೀಲಪತ್ರಂ || ೪೨ ||

ಕೃಪಾಸಮಾಲೋಕಿತವಾಮನೇತ್ರಂ ಧ್ಯಾಯಂತವಿಶಾಶಂಹೃದಿ ಪಕ್ಷಿಪತ್ರಂ |
ಕಂಠೆ ಸಮಾಶ್ಲಿಷ್ಟ ಸುಪದ್ಮಮಾಲಂ ಬ್ರಹ್ಮಾಂಡ ಪಿಂಡೀಕೃತ ಪಿಂಡಜಾಲಂ || ೪೩ ||

ಧ್ಯಾಯಂತವಿಶಾಶಸ್ಯ ನೃಸಿಂಹಲೀಲಾಂ ಧ್ಯಾಯಂತ ಮಾದ್ಯಂ ಹೃದಿಲೋಕರೂಪಂ |
ತಂ ದೃಷ್ಟ್ವಾವ ದಂಡವತ್ ಭೂಮೌ ಮುನಿಂ ಮಂದಾರಸನ್ನಿಭಂ || ೪೪ ||

ವದಂತಂ ಸ್ವಮತಂ ಸಮ್ಯಕ್ ಪೇತುಶ್ಚರಣಯೋರ್ಮುದಾ |
ಊಚುಸ್ತೇಷಾಂ ಚರಿತ್ರಾಣಿ ಹಿ ಅಸಾಕ್ಷಿಸ್ತ್ವೇನ ನಿಂದಿತಾಃ || ೪೫ ||

ಪಾಹಿ ಪಾಹಿ ಮಹಾಭಾಗ ಕೃಪಾಲೊ ದೀನವತ್ಸಲ |
ಇತ್ಯಾಕರ್ಣ್ಯ ವಚಸ್ತೇಷಾಂ ಶೋಕಪೂರಿತದಿಙ್ಮುಖಂ || ೪೬ ||

ಉದ್ಧರಿಷ್ಯಾಮ್ಯಹಂ ವಿಪ್ರಾಃ ಕ್ಷಣಾದೇವ ನ ಸಂಶಯಃ |
ಕೃಪಾಕರಃ ಸ ಭಗವಾನ್ ಇತ್ಯುಕ್ತ್ವಾಚಾಭಯಂದದೌ || || ೪೭ ||

ತಪ್ತಮುದ್ರಾಂಕಿತಂ ಕೃತ್ವಾ ಮತಂ ವೇದ್ಯ ಹರಾಭಿಧಂ |
ತಥಾಷ್ಟಾಕ್ಷರ ಮಂತ್ರಂ ಚ ವಿಷ್ಣುನಾಮಾನ್ವಿತಂ ಶುಭಂ || ೪೮ ||

ಋಷಿಶ್ಚ ವಾಮದೇವಾಖ್ಯಃ ಛಂದೋನುಷ್ಟುಪ್‌ಪ್ರಕೀರ್ತಿತಃ |
ತಥಾ ನಾರಾಯಣೋ ದೇವಃ ಕೈವಲ್ಯಾರ್ಥ ಪ್ರದಾಯಕಃ || || ೪೯ ||

ಪುರಾ ಚಕ್ರಧರಃ ಶ್ರೀಮಾನ್ ಹಿತಂ ಮಾಮುಕ್ತವಾನ್ ಕಿಲ |
ಕಂಠೆ ಚ ತುಳಸೀದಾಮ ಲಲಾಟೇ ಚೋರ್ಧ್ವಪುಂಡ್ರಕಂ || ೫೦ ||

ಮುಖೆಪಂಚಾಕ್ಷರಂ ಯಸ್ಯ ವಿಷ್ಣುರೇವ ನ ಸಂಶಯಃ |
ಬಹುನಾತ್ರ ಕಿಮುಕ್ತೇನ ಕುರ್ವಂತು ಮಮಶಾಸನಂ || ೫೧ ||

ಹೀಗೆ ಅಪ್ರಾಸಂಗಿಕವಾಗಿ ಅನುಷ್ಟುಪ್ ಶ್ಲೋಕ ಮಧ್ಯದಲ್ಲಿ ಸೇರಿಕೊಂಡದ್ದರಿಂದಲೂ, ಬೇರೆಯಾದ ತನ್ನ ಛಂದಸ್ಸಿನಿಂದಲೂ ಪೂರ್ವೋತ್ತರ ಅರ್ಥಗಳಿಗೆ ಹೊಂದಿಕೊಳ್ಳದ ಅರ್ಥವಿರುವುದರಿಂದಲೂ, ವಸುರಾಜನ ಸಮಾನಕಾಲ ಮಾಧ್ವಮತಕ್ಕೆ ಹತ್ತುವುದಿಲ್ಲವಾದುದರಿಂದಲೂ, ಈ ಶ್ಲೋಕಗಳ ಮಟ್ಟಿಗೆ ಪ್ರಕ್ಷಿಪ್ತ, ಇತ್ತೀಚೆಗೆ ಅಕುಶಲನೊಬ್ಬನು ಸೇರಿಸಿರಬೇಕೆಂದು ಧಾರಾಳ ಹೇಳಬಹುದು. ಸಕಾರಣವಾಗಿ ಪ್ರಕ್ಷೇಪವೆಂದು ಸಿದ್ಧ ಮಾಡಿದಾಗ ಅದನ್ನು ಸ್ವೀಕಾರ ಮಾಡದಿದ್ದರೆ ಇಡೀ ಅಧ್ಯಾಯಕ್ಕೆ ವ ಗ್ರಂಥಕ್ಕೇನೇ ಅರ್ವಾಚೀನತ್ವ ಪ್ರಾಪ್ತವಾಗಿ ಅನಾದರಣೀಯತೆಯು ಒಪ್ಪಬೇಕಾಗುತ್ತದೆ. ಆದುದರಿಂದ "ಸರ್ವನಾಶೆ ಸಮುತ್ಪನ್ನೆ ಅರ್ಧಂ (ಅಲ್ಪಂ)ತ್ಯಜತಿ ಪಂಡಿತಃ" ಅಂದರೆ ಸಂಪೂರ್ಣ ಹಾಳಾಗುವ ಸಂಭವ ಒದಗಿದಾಗ ಪಂಡಿತನು ಸ್ವಲ್ಪವನ್ನು ಮಾತ್ರ ತ್ಯಜಿಸಿ ಹೆಚ್ಚಿನ ಭಾಗ ಉಳಿಸಿಕೊಳ್ಳುತ್ತಾನೆ ಎಂಬಂತೆ 3 ಶ್ಲೋಕಗಳನ್ನು ಮಾತ್ರ ಪ್ರಕ್ಷೇಪವೆಂದು

ಉಳಿದ ಭಾಗದ ಗೌರವ ಉಳಿಸಿಕೊಳ್ಳಬಹುದು. ಇದು ಪಂಡಿತರ ರೀತಿ. ಪಾಮರರ ನೀತಿ ಸ್ಪಷ್ಟವಿದೆ. ಸ್ವಲ್ಪ ದೋಷವನ್ನು ಕಂಡುಹಿಡಿದು ಸಂಪೂರ್ಣ ಅಪದ್ಧವೆನ್ನುವುದು. ಭಟ್ಟರಿಗೆ ಆ ಭಾಗವತ ಸಂಪ್ರದಾಯದ ಯತೀಶ್ವರರೆಂದಾಗಲಿ, ಶ್ರೀವಾದಿರಾಜರೆಂದರೆ ಪೂರ್ವೋತ್ತರ ವಿರೋಧವಿದೆ ಎಂದಾಗಲಿ, ತನ್ಮೂಲಕ ಸದರಿ 3 ಶ್ಲೋಕಗಳು ಪ್ರಕ್ಷಿಪ್ತ ಗಳೆಂದಾಗಲಿ ಹೊಳೆಯಲಿಲ್ಲ. ಅವರಿಗೆ ಹೊಳೆದದ್ದು ಕೇವಲ ವಸು ಚಕ್ರವರ್ತಿ. ಆತ ನನ್ನು ಅಲೂಪ ಅರಸನೆಂದರೂ 1254ನೇ ಇಸವಿ ಈಚೆಗೆ ಆತನು ಬರಲಾರ. ಶ್ರೀವಾದಿ ರಾಜರು ಅಷ್ಟು ಹಿಂದಿನ ಕಾಲಕ್ಕೆ ಹೋಗಲಾರರು. ಹೀಗಾಗಿ ಕಾಲ ವ್ಯತ್ಯಾಸವಾಗು ತ್ತದೆ. ಅದಕ್ಕೆ ವಸು ಚಕ್ರವರ್ತಿಯೂ ಇಲ್ಲ. ಅಲೂಪ ಅರಸ ವಿಬುಧವಸುವೂ ಇಲ್ಲ. ಎಲ್ಲಾ ಸುಳ್ಳು. ಆತ ಕಾಲ್ಪನಿಕ ವ್ಯಕ್ತಿ. ಅದಕ್ಕೆ ಗ್ರಾಮಪದ್ಧತಿಯಲ್ಲಿ ಅಂಥಾ ರಾಜ ನಿದ್ದನು ಎಂದು ಬರೆದದ್ದೇ ಕಾರಣ. "ಮೂಲದಾಖಲೆಗಳನ್ನು ಪರಿಶೋಧಿಸಿದಾಗ ಅಂತಹ ಒಬ್ಬ ಅರಸನೇ ಆ ಕಾಲದಲ್ಲಿ ಇರಲಿಲ್ಲ ಎಂದು ಒಪ್ಪಬೇಕಾಗುತ್ತದೆ" ಎಂದು ಬರೆಯುತ್ತಾರೆ. ಅಂಥಾ ಮೂಲದಾಖಲೆ ತೋರಿಸಿ ಕೊಟ್ಟಿದ್ದರೆ ನಮಗೂ ಉಪಕಾರ ವಾಗುತ್ತಿತ್ತು. 13ನೇ ಶತಕದ ಪೂರ್ವಾರ್ಧದಲ್ಲಿ ವಸು ಚಕ್ರವರ್ತಿ ವ ವಿಬುಧವಸು ಇರಲಿಲ್ಲವೆಂಬ ಮೂಲದಾಖಲೆ ಯಾವುದು ಇದೆ. ಅದನ್ನು ನೋಡಬೇಕು ಎಂಬ ಕುತೂ ಹಲ ನಮಗೂ ಇದೆ? ಆದರೆ ಅಂಥಾ ದಾಖಲೆ ಇರುವ ಭರವಸೆ ಮಾತ್ರ ಸದ್ಯ ನಮ ಗಿಲ್ಲ. ನಿಜವಾಗಿ ವಿಚಾರ ಮಾಡಿದರೆ ಬಸರೂರು ಎಂಬ ಊರು, ಕೋಟ, ಕೋಟೀಶ್ವರ ಗಳ ಸಮೀಪವಿದೆ. ಅದರ ಮೂಲರೂಪ "ವಸುಪುರ" ಅದರ ಮೇಲಿಂದ ವಸುರಾಜ ನೊಬ್ಬನು ಇರಬೇಕೆಂದು ಅನಿಸುತ್ತದೆ. 18ನೇ ಶತಕದ ಮಧ್ಯದಲ್ಲಿ ಬರೆದ "ಕೆಳದಿ ನೃಪ ವಿಜಯ"ದಲ್ಲಿ ಲಿಂಗಣ್ಣ ಕವಿ ವಸುಪುರವನ್ನು ಉಲ್ಲೇಖಿಸಿದ್ದಾನೆ. ಇನ್ನೂ ಹಲ ವರು ಬರೆದಿರಬಹುದು. ಭಟ್ಟರು ಸರ್ವಜ್ಞರಲ್ಲ. ಎಲ್ಲಾ ಪುಸ್ತಕ ನೋಡಲಿಲ್ಲ. ನೋಡು ವುದೂ ಇಲ್ಲ. ಭಟ್ಟರಿಗೆ ಸಹ್ಯಾದ್ರಿಯನ್ನು ಸೋದೆ ಶ್ರೀವಾದಿರಾಜರ ನಂತರದ್ದೆಂದು ಸ್ಥಾಪನೆ ಮಾಡಬೇಕಾಗಿದೆ. ಅದಕ್ಕೆ ವಸುರಾಜನು ಅಡ್ಡ ಬರುತ್ತಾನೆ. ಆದುದರಿಂದ ಆತನನ್ನು ಹಾರಿಸಿ ಬಿಟ್ಟಿದ್ದಾರೆ. ಇದಿಷ್ಟು ಸತ್ಯ. ಇದೆಲ್ಲಾ ಇತಿಹಾಸ ಬರೆಯುವವರ ಕುಹಕ ರೀತಿಗಳು. ಅಂತೂ ಸಹ್ಯಾದ್ರಿ ಉತ್ತರಖಂಡ ವಾದಿರಾಜರ ನಂತರದ್ದಲ್ಲ ಖಂಡಿತ.

ಗ್ರಾಮಪ್ರದಾನ ಸಮಯೆ ಪ್ರೋಚುರ್ಭಾರ್ಗ ನಿರ್ಮಿತಾಃ |
ಪುರಾ ಭಾರ್ಗವ ರಾಮೇಣ ಸಾಧಿತಾ ಭೂರಿಯಂ ನೃಪ || ೮ ||

ಆಹೃತ್ಯ ತತ್‌ಕಥಂ ತೇಭ್ಯೋ ದದಾತಿ ವಸುಧಾಮಿಮಾಂ |
ತಥಾ ವದತು ಮೇಧಾವೀ ಕಾಗತಿ ನೋರ್ವಿಧೀಯತಾಂ || ೯ ||

ತೇಷಾಂ ವಾಕ್ಯಮಥಾಕರ್ಣ್ಯ ಸಾಂತ್ವಯನ್ನಾಹ ಪಾರ್ಥಿವಃ |
ಗ್ರಾಮಂ ಚತುಷ್ಟಯಂ ದಾಸ್ಯೆ ಸ್ಥೀಯತಾಂ ತತ್ರ ಶಾಶ್ವತಂ || ೧೦ ||

ಇತ್ಯುಕ್ತ್ವಾ ಸ ನೃಪತಿಃ ಶ್ರೀಮಾನ್ ದದೌ ಗ್ರಾಮಚತುಷ್ಟಯಂ |
ಕುಡಾಲಂ ಪದಿಕಂ ಚೈವ ಮಟ್ಟೇ ನಾಗಾಭಿಧಂ ತಥಾ ||೧||
ಆಗತೇಭ್ಯೋ ದ್ವಿಜಾತಿಭ್ಯಃ ಶೇಷಾಂ ಭೂಮಿಂ ಪ್ರದತ್ತವಾನ್ |

ಸಹ್ಯಾದ್ರಿ ಉತ್ತರಖಂಡದ 15ನೇ ಅಧ್ಯಾಯದ ಶ್ಲೋಕದಲ್ಲಿ ಅಹಿಚ್ಛತ್ರದ ಬ್ರಾಹ್ಮಣರಿಗೆ ಗ್ರಾಮಗಳನ್ನು ಕೊಡುವಾಗ ಹಿಂದಿನ ಮೂಲನಿವಾಸಿಗಳು ತಕರಾರು ಮಾಡಿದರು. ಪರಶುರಾಮನಿಂದ ನಮಗೆ ಕೊಡಲ್ಪಟ್ಟ ಗ್ರಾಮಗಳನ್ನು ನೀನು ಅಪಹರಿಸಿದರೆ ನಮ್ಮ ಗತಿ ಏನೆಂದು ಕೇಳಿದರು. ಅದಕ್ಕೆ ರಾಜನು ಸಮಾಧಾನಪಡಿಸಿ, ಕುಡಾಲ, ಪದಿಕ, ಮಟ್ಟು, ನಾಗ—ಅಂದರೆ ಆಜೂರು ಎಂಬ 4 ಗ್ರಾಮಗಳನ್ನು ಕೊಟ್ಟನು. ಉಳಿದ ಗ್ರಾಮಗಳನ್ನು ಬಂದವರಿಗೆ ಕೊಟ್ಟನು ಎಂದಿದೆ. ಇದರಿಂದ ತಿಳಿಯಬಹುದಲ್ಲಾ—ಮೂಲನಿವಾಸಿಗಳಿಂದ ಅಹಿಚ್ಛತ್ರದವರಿಗೆ ಭೂಮಿ, ಅಧಿಕಾರ, ಪ್ರಾಪ್ತವಾದದ್ದು ರಾಜನ ಮೂಲಕವಾಗಿಯೇ ಹೊರತು ದಬ್ಬಾಳಿಕೆಯಿಂದ ಅಲ್ಲ. ಅದೂ ಸ್ಥಾನಿಕರಿಂದ ಅಲ್ಲ. ಸ್ಥಾನಿಕರು ಆಗ ಹುಟ್ಟಿರಲಿಲ್ಲ. ದಬ್ಬಾಳಿಕೆಯಿಂದ ಅಧಿಕಾರ ಬದಲಾವಣೆ ಆಗಲು ಸಾಧ್ಯವೂ ಇಲ್ಲ. ಅದಕ್ಕಾಗಿ ಅರಾಜಕತೆ ಉಪಪಾದನೆಯೂ ಸರಿಯಲ್ಲ. ಅರಾಜಕತೆ ಎಂಬುದು ಡಾ| ಸಾಲೆತ್ತೂರರ ಮನೋರಥವೇ ಹೊರತು ನಿಜವಾಗಿ ಅರಾಜಕತೆ ಆಗಿರಲಿಲ್ಲ. ಏಕೆಂದರೆ ಆಧಾರ ಮೂಲಕ ಸ್ಥಿರಪಡಿಸಲಿಲ್ಲ. ಒಂದು ವೇಳೆ ಅರಾಜಕತೆಯಲ್ಲಿ ಹಾಗೆ ಅಧಿಕಾರ ಹಸ್ತಾಂತರ ಆಗಿದ್ದರೆ ಅದಕ್ಕೆ ಬಹುಜನರ ಬೆಂಬಲ ವಿದ್ದರೆ ಅದು ಯುಕ್ತವಾಯಿತೇ ವಿನಹ ಅನ್ಯಾಯವಾಗುವುದಿಲ್ಲ. ಅದು ತಪ್ಪಾಗಿದ್ದರೆ ಆಗಲೇ ಗಲಾಟೆ ಮಾಡಬೇಕಾಗಿತ್ತು. ಅದೆಲ್ಲಾ ಬಿಟ್ಟು ಪೂಜೆ ಕಸಿದುಕೊಂಡರೆಂದ ಮೇಲೆ ಮನಸಾರೆ ಒಪ್ಪಿ ದೇವಕಾರಿ ಕೆಲಸ ಮಾಡುತ್ತಾ ಇವತ್ತಿನ ತನಕ ಸುಮ್ಮನಿದ್ದು ಡಾ| ಸಾಲೆತ್ತೂರರವರು ಪುಸ್ತಕ ಬರೆದರೆಂದಾದ ಮೇಲೆ ಇದೀಗ ಈ ದೇವಕಾರಿಗಳು ಚಡಪಡಿಸುತ್ತಾರಲ್ಲಾ? ಇದರ ಪ್ರಯೋಜನವೇನು? ಸುಳ್ಳುಪ್ರಚಾರ ಮಾಡಿ ಶಿವಳ್ಳಿಯವರನ್ನು ಅಪಹಾಸ ಮಾಡುವುದು ಮಾತ್ರವಲ್ಲದೆ ಆಸ್ತಿ, ಹಕ್ಕು, ಅಧಿಕಾರ ತಿರುಗಿ ವಸೂಲು ಮಾಡುವ ಸಾಧ್ಯತೆ ಇದೆಯೇ? ಮೊದಲಿದ್ದವರು ಸ್ಥಾನಿಕರಲ್ಲ. ಅವರು ಮಟ್ಟು, ಆಜೂರು ಮೊದಲಾದವರು. ಇವರು ಪಾಟಾಳಿಗಳು. ಭಟ್ಟರು ಶಾಸನಗಳ ಮೇಲಿಂದ ರುಜುವಾತು ಪಡಿಸಿದ ಪ್ರಕಾರ-1. ಬ್ರಾಹ್ಮಣ ಅರ್ಚಕ ವರ್ಗ, 2. ಸ್ಥಾನಿಕ ದೇವಕಾರಿ ವರ್ಗ, 3. ದೇವಡಿಗ ಪರಿಚಾರಕ ವರ್ಗ "ವ್ಯೊಲಿ" ಹೀಗೆ ಎಂದಿನಿಂದಲೂ ದೇವಸ್ಥಾನದಲ್ಲಿ ಕೆಲಸ ಮಾಡುತ್ತಾ ಇರುವುದು ಇವತ್ತಿನ ವರೇಗೆ ಸಂಪ್ರದಾಯ ಪ್ರಾಪ್ತವಾಗಿದೆ. ಅದನ್ನು ಈ P.H.D. ಪದವೀಧರರು ಇಂಗ್ಲಿಷ್ ಇತಿಹಾಸ ಬರೆದು ಅಲ್ಲಗಳೆಯಬೇಕೆನ್ನುತ್ತಾರೆ. ಇವರ ಇತಿಹಾಸವೆಂದರೆ ರೀತಿ, ರಿವಾಜಿ, ಶಾಸ್ತ್ರ, ಸಂಪ್ರದಾಯ, ಎಲ್ಲಾ ಸುಳ್ಳು, ಮೋಸ, ಎನ್ನುವಂಥಾದ್ದೇ ಆಗಿದೆ. ಇಂಗ್ಲೀಷರು ಈ ದೇಶ ಬಿಟ್ಟು ಹೋಗುವಾಗ ಹೊಂದಿಕೆಯಾಗಿ ಸುಳ್ಳು ಬರೆದು, ನಿಮ್ಮವರನ್ನೂ, ನಿಮ್ಮ ಸಂಸ್ಕೃತಿ

ಯಶಸ್ಸು ತೆಗೆಯುತ್ತಾ ಇರಿ ಎಂದು ತಲೆಯ ಮೇಲೆ ಕೈಯಿಟ್ಟು ಹೋಗಿದ್ದಾರೆಂ ಎಂಬುವಂತೆ ಆಗಿದೆ.

(ತು. ಪು. ಪು. 121ರಲ್ಲಿ) ಸಹ್ಯಾದ್ರಿಯಲ್ಲಿ ಹೇಳಿದಂತೆ ಅಲ್ಲವಾದರೂ ಸನತ್ಕುಮಾರಸಂಹಿತೆ ಮತ್ತು ಬ್ರಹ್ಮಾಂಡ ಪುರಾಣಗಳ ಉಲ್ಲೇಖದಿಂದ 1. ತ್ರೇತಾಯುಗ, 2. ಆ ಕಾಲದ ಪರಶುರಾಮ, 3. ಆತನ ಸೃಷ್ಟಿಯಾದ ಪಶ್ಚಿಮ ಕರಾವಳಿ, ಇವುಗಳ ಉಂಟೆಂದು ನಿಶ್ಚಿತಪಡಿಸಿದ್ದಾರೆ. ಅವರಿಗೆ ತಿಳಿಯದಿರುವ ವಿಷಯವೆಂದರೆ "ಪರಶುರಾಮನಿಗೂ ಅಹಿಚ್ಛತ್ರದ ಮಯೂರವರ್ಮನ ಬ್ರಾಹ್ಮಣರಿಗೂ ಏನು ಸಂಬಂಧವೆಂಬುದು." ಪರಶುರಾಮನು ಅಹಿಚ್ಛತ್ರದ ಬ್ರಾಹ್ಮಣರನ್ನು ನಿರ್ಮಿಸಲಿಲ್ಲ. ಪರಶುರಾಮ ನಿರ್ಮಿತರೆಂದರೆ ದೇವಕಾರಿಗಳೇ ಎಂದು ಅದರಲ್ಲಿ ಅಭಿಪ್ರಾಯ ಹುದುಗಿರುತ್ತದೆ. ಸಹ್ಯಾದ್ರಿಯಲ್ಲಿಯಾದರೂ ಅಹಿಚ್ಛತ್ರದವರನ್ನು ಪರಶುರಾಮ ನಿರ್ಮಿಸಿದನೆಂದು ಹೇಳಿರುವುದಿಲ್ಲ. ಶಿವಳ್ಳಿಯವರಾದರೂ ತಮ್ಮನ್ನು, ಪರಶುರಾಮ ನಿರ್ಮಿಸಿದನು, ಎಂದು ಹೇಳಿಕೊಳ್ಳುವುದಿಲ್ಲ. ಅವರೆ ಪರಶುರಾಮ ನಿರ್ಮಿತರು ದೇವಕಾರಿ ಸ್ಥಾನಿಕರೆಂದು ಏನು ಹೇಳಬಯಸುತ್ತಾರಲ್ಲ? ಅದು ಮಾತ್ರ ಸರಿಯಲ್ಲ. ಪೂರ್ವೋಕ್ತ 15ನೇ ಅಧ್ಯಾಯ ಪ್ರಕಾರ ಅವರು ಕುಶಾಲಕರು, ಪದ್ಯಬ್ರಾಹ್ಮಣರು, ಮಟ್ಟುಬ್ರಾಹ್ಮಣರು, ನಾಗಬ್ರಾಹ್ಮಣರು ಬೇರೆಯೇ ಇರುತ್ತಾರೆ. ಅವರ ಪೈಕಿ ಯಾರೇ ಆಗಲಿ, ಸ್ಥಾನಿಕರಲ್ಲ ಮತ್ತು ಸ್ಥಾನಿಕರು 1ನೇ ವಲಸೆಯಲ್ಲಿ ಬಂದವರಲ್ಲವೇ? ವಸ್ತುಸ್ಥಿತಿ ಹೀಗಿದ್ದರೂ (ತು. ಪು. 121ರಲ್ಲಿ) "ಆ ಕಾಲದಲ್ಲಿ ಇಲ್ಲಿಯ ಸ್ಥಳವಂದಿಕರಾದ ಸ್ಥಾನಿಕ ಬ್ರಾಹ್ಮಣರೇ ಆ ಕಾಲದ ಇಲ್ಲಿಯ ಬ್ರಾಹ್ಮಣರಿರಬೇಕು. ಹೊಸತಾಗಿ ಬಂದ ಬ್ರಾಹ್ಮಣರು ಪ್ರಾದುರ್ಭಾವಕ್ಕೆ ಬಂದ ನಂತರ ತಮ್ಮ ಸ್ಥಾನವನ್ನು ಸ್ಥಿರಮಾಡಲಿಕ್ಕೆ ಯೋಗ್ಯತೆ ಖ್ಯಾತಿಗಳನ್ನು ಹೆಚ್ಚಿಸುವುದಕ್ಕೆ ಬೇರೆ ಬೇರೆ ನಮೂನೆಯ ಕಥೆಗಳನ್ನು ಕಟ್ಟಿದಂತೆ ಕಾಣುತ್ತದೆ." ಎಂದು ಗುರುರಾಜ ಭಟ್ಟರು ಬರೆಯುತ್ತಾರಲ್ಲಾ? ಇದರ ಅರ್ಥವೇನೆಂದರೆ? ಸ್ಥಾನಿಕರ ಸ್ಥಾನ ಸ್ಥಿರಪಡಿಸುವುದಕ್ಕಾಗಿ, ಯೋಗ್ಯತೆ ಖ್ಯಾತಿಗಳನ್ನು ಹೆಚ್ಚಿಸುವುದಕ್ಕಾಗಿ ಹೊಸ ಹೊಸ ನಮೂನೆಯ ಕಟ್ಟುಕತೆಗಳನ್ನು ಈ ಪುಸ್ತಕದಲ್ಲೇ ತಾನು ಬರೆಯುತ್ತಿದ್ದೇನೆಯೆಂಬ ತನ್ನ ಮನೋಗತವನ್ನು ಪ್ರಕಟಿಸಿ ಶಿವಳ್ಳಿಯವರ ಮೇಲೆ ಆರೋಪಿಸಿರುವುದಿಷ್ಟೇ! ಶಿವಳ್ಳಿಯವರ ಕಟ್ಟುಕತೆಯೆಂದು ಏನು ಹೇಳುತ್ತಾರೋ? ಅದು ಕೊಚ್ಚಿಯಿಂದ ಕಾಶೀತನಕ ಭಾರತದಲ್ಲೆಲ್ಲಾ ಇರುವ ಪುಸ್ತಕದಲ್ಲಿ ಬರೆದದ್ದುಂಟು. ಅದು ಶಿವಳ್ಳಿಯವರ ಕಟ್ಟುಕತೆ ಹೇಗಾಗಬಲ್ಲುದು? ದೇಶದ ಜನರೆಲ್ಲಾ ಶಿವಳ್ಳಿಯವರ ಕಟ್ಟುಕತೆಗಳನ್ನು ಬರೆದಿಟ್ಟು ಕಾಪಾಡಿಕೊಂಡಿದ್ದಾರೆಂದರೆ ಚಿತ್ತಸ್ವಾಸ್ಥ್ಯ ಉಂಟೆಂದು ಯಾರೂ ಹೇಳಲಾರರು. ತಾವು ಬರಿಯುವುದಾದರೆ ಶುದ್ಧ ಕಟ್ಟುಕತೆಯೇ ಸೈ. ಅದಕ್ಕೆ ಆಧಾರವೆಂದರೆ ತಮ್ಮ ತಲೆಯು ಆಧಾರ. ಬೇರೇನು ಇದೆ? ಮೊದಲು ಹೇಳಿದಂತೆ ಡಾ| ಸಾಲೆತ್ತೂರರ ಪುಸ್ತಕಗಳನ್ನೋದಿ ಏನೇನೊ ತಪ್ಪು ಸಂಗತಿಗಳನ್ನು ತಲೆಗೆ ಹೊಗಿಸಿಕೊಂಡರು. ಆ ಮೇಲೆ ವೇಷಕ್ಕೆ ತಕ್ಕ ಭೈರೂಪವೆಂಬಂತೆ ಮಾಡಿಕೊಂಡಿರುತ್ತಾರೆ. ಬೇರೇನೂ ಅರ್ಥವಿದ್ದಂತೆ ಕಾಣುವುದಿಲ್ಲ.

(ತು. ಪು. 231ರಲ್ಲಿ) "ಮೈಸೂರು ಶಾಸನಗಳಲ್ಲಿ ಅಹಿಚ್ಛತ್ರ ಅಗ್ರಹಾರ ಎಂಬ ಹೆಸರುಗಳು ಅಲ್ಲಲ್ಲಿ ಬಂದಿವೆ. ಆದುದರಿಂದ ಕನ್ನಡ ಜಿಲ್ಲೆಗೆ ಬ್ರಾಮ್ಹಣರು ಬಂದ ಬಗೆಗೆ ಸಂದೇಹವಿಲ್ಲ—ಎಂಬ ನಮೂದು ಇದೆ. ಇದರಿಂದ ಅಹಿಚ್ಛತ್ರವಿದೆ. ಅಲ್ಲಿ ಬ್ರಾಮ್ಹಣರಿದ್ದಾರೆ, ಅಲ್ಲಿಂದ ಕನ್ನಡ ಜಿಲ್ಲೆಗೆ ಬ್ರಾಮ್ಹಣರು ಬಂದಿದ್ದಾರೆ, ಇದು ಸರಿ. ಇದು ನಿಜ. ಇದರ ಬಗ್ಗೆ ಸಂಶಯವಿಲ್ಲ. ಆದರೆ ಅಹಿಚ್ಛತ್ರ ಮಾತ್ರ ಎಲ್ಲಿದೆ ಎಂಬುದು ಭಟ್ಟರಿಗೆ ನಿಶ್ಚಯವಿಲ್ಲ. ಸಿಂಧೂ ತೀರದಲ್ಲೋ? ಬರೇಲಿ ಜಿಲ್ಲೆಯಲ್ಲಿಯೋ? ಹಿಮಾಚಲದ ಅಂಚಿನಲ್ಲಿಯೋ? ಗೊತ್ತಿಲ್ಲ. ಅಹಿಚ್ಛತ್ರದ ನಿಶ್ಚಿತ ಸ್ಥಾನದ ಬಗ್ಗೆ ಭಿನ್ನಾಭಿಪ್ರಾಯಗಳು ಇದ್ದುದು ಕಂಡುಬರುತ್ತದೆ, ಎನ್ನುತ್ತಾರೆ. ಗೋದಾವರೀ ನದೀ ತೀರ ಮಾತ್ರ ಖಂಡಿತ ಅಹಿಚ್ಛತ್ರವಿರುವ ಸ್ಥಳವಲ್ಲ. ಇದು ಸಂಪೂರ್ಣ ಐತಿಹಾಸಿಕವಾಗಿ ಭಟ್ಟರಿಗೆ ಗೊತ್ತಾಗಿದೆ. ಏಕೆಂದರೆ ತುಳು ಗ್ರಾಮಪದ್ಧತಿಯಲ್ಲಿ ಮತ್ತು ಉತ್ತರ ಸಹ್ಯಾದ್ರಿಯಲ್ಲಿ ಅಹಿಚ್ಛತ್ರವು ಗೋದಾವರೀ ತೀರದಲ್ಲಿದೆ ಎಂದು ಬರೆದಿರುತ್ತದೆ. ಉತ್ತರ ಸಹ್ಯಾದ್ರಿಯಲ್ಲಿದೆ ಎಂದರೆ ಇಲ್ಲವೆಂದು ಭಟ್ಟರ ಅದರ ಅರ್ಥ. ಉದಾಹರಣೆ ಪೂರ್ವಕ ಮುಂದೆ ವಿವರಿಸಲಾಗುತ್ತದೆ. ಹೀಗಿರುವಾಗ ತುಳು ಶೀವಳ್ಳಿಯವರು ಮಾತ್ರವಲ್ಲದೆ ಕೂಟ ಮಹಾಜಗತ್ತಿನವರು ಕೂಡಾ "ನಾವು ಕದಂಬರಾಜನಾದ ಮಯೂರ ವರ್ಮನ ಕಾಲದ ಅಹಿಚ್ಛತ್ರವನ್ನು ವಿಚಾರಿಸುವುದಾದರೆ ಅದು ಗೋದಾತೀರದ ದಕ್ಷಿಣ ಪ್ರದೇಶದ ಅಹಿಚ್ಛತ್ರವೆಂಬುದರಲ್ಲಿ ಯಾವ ಸಂದೇಹಕ್ಕೂ ಎಡೆಯಿಲ್ಲ." ಎಂದು ಬರೆದ ಮೇಲೆ ಕೇಳುವುದೇನು? ಭಟ್ಟರು ಸಂಕೋಚವಿಲ್ಲದೆ ತೀರ್ಮಾನವಿತ್ತಿದ್ದಾರೆ. (ತು. ಪು. 228) "ತೆಲಂಗಾಣದಲ್ಲಿ ಯಾವ ಅಹಿಚ್ಛತ್ರವೂ ಇಲ್ಲ. ಈ ವಿಷಯದಲ್ಲಿ ಡಾ| ಪ್ರಿನ್ಸಸ್ ಬುಕ್ಕನರು ಬರೆದರೂ ಭಟ್ಟರು ಕೇಳುವಂತಿಲ್ಲ. ಏಕೆಂದರೆ ಅವರಿಗೆ ವಿಮರ್ಶಕ ಬುದ್ಧಿ ಇಲ್ಲ ಎಂದೇ ಉತ್ತರ. ತಮಗೆ ಎಲ್ಲಿದೆಯೆಂದು ಹೇಳಲು ಗೊತ್ತಿಲ್ಲವಾದರೂ ಚಿಂತೆ ಇಲ್ಲ. ಅಹಿಚ್ಛತ್ರದಿಂದ ಬಂದಿರುವ ಹವೀಕ, ಕೋಟ, ಶೀವಳ್ಳಿಯವರು ಹೇಳಿದರೂ, ಅನುವಂಶಿಕವಾಗಿ ಬಂದ ಐತಿಹ್ಯ ಪ್ರಕಾರ ತಿಳಿದು ಏಕಕಂಠದಿಂದ ಕೂಗಿದರೂ, ಭಟ್ಟರು ಅಹಿಚ್ಛತ್ರವನ್ನು ಗೋದಾವರೀ ತೀರದಲ್ಲಿ ಇರಗೊಡುವುದಿಲ್ಲ. ಇದು ವಿಮರ್ಶೆ, ಸಂಶೋಧನೆ, ಇತಿಹಾಸ, ಎಂಬುದೊಂದೇ ಉತ್ತರ. ವಾಸ್ತವಿಕವೆಂದರೆ ಒಂದೇ ಅಹಿಚ್ಛತ್ರವಿರಬೇಕೆಂದೇನು? ಸಿಂಧೂತೀರದಲ್ಲಿ ಒಂದು, ಗಂಗಾತೀರದಲ್ಲಿ ಮತ್ತೊಂದು ಗೋದಾವರೀ ತೀರದಲ್ಲಿ ಇನ್ನೊಂದು ಹೀಗೆ ಏಕೆ ಇರಬಾರದು? ಅಹಿಚ್ಛತ್ರ ಒಂದೇ ಇರಬೇಕೆಂದು ಶಾಸನಗಳ ದಾಖಲೆ ಇದೆಯೇನು? ಬುಕ್ಕನಂಥವರು ವಿಚಾರಿಸಿ ಬರೆದರೆ, ಅಲ್ಲಿಂದ ಬಂದವರು ಅನುವಂಶಿಕವಾಗಿ ತಿಳಿದು ಬರೆದಿಟ್ಟದ್ದರೆ, ಅದೆಲ್ಲ ಆಗದು. ಗೋದಾತೀರದಲ್ಲಿ ಅಹಿಚ್ಛತ್ರ ಇರಕೂಡದು. ಇದು ಎಂತಹ ಹಟ.

ನಾಳೆ ನಾನೊಬ್ಬ "ಚೈತ್ರನ ಮಗ ಮೈತ್ರನಿದ್ದೇನೆ" ಎಂದರೆ ಅದು ಏಕೆ ಆದೀತು? ನೀನು ಮನುಷ್ಯನ ಮಗನಲ್ಲ, ಕೋತಿಯ ಮಗನಿದ್ದೀ. (ವಿಕಾಸ ವಾದದ ಪ್ರಕಾರ) ಚಾರಿತ್ರಿಕವಾಗಿ ವಿಮರ್ಶೆ, ಸಂಶೋಧನೆ ಮಾಡಿ ಹೇಳುತ್ತೇನೆ ಎಂದ ಹಾಗಾಯಿತಲ್ಲ!

ಇದರಂತೆನೇ ಅಲ್ಲವೇ "ಅಹಿಚ್ಛತ್ರದಿಂದ ತುಳುವರು ಮಾತ್ರ, ಗಂಡಸರು ಮಾತ್ರ, ತುಳುವಕ್ಕೆ ಮಾತ್ರ, ಶೂದ್ರಸ್ತ್ರೀಯರನ್ನು ಮದುವೆಯಾಗುವುದಕ್ಕೇನೆ ಎಂದು ತಮ್ಮ ಹೆಂಡರು ಮಕ್ಕಳನ್ನು ಸಿಕ್ಕವರಿಗೆ ಹಾದಿಯಲ್ಲಿ ಬಿಟ್ಟು ಬಂದರು" ಎಂದು ಬರೆದಿರುವುದು. ಐತಿಹಾಸಿಕವಾಗಿ ಸಂಶೋಧನೆ ಮಾಡಿ ಬರೆದಿರುವುದು. ಅಂದರೆ ಪಾಟಾಳಿಗಳು ಒಬ್ಬ ಬ್ರಾಮ್ಹಣನಿಗೆ ದಾಸಿಯಲ್ಲಿ ಹುಟ್ಟಿದವರೆಂದು ಉತ್ತರ ಸಹ್ಯಾದ್ರಿಯಲ್ಲಿ ಬರೆದಿದೆಯಲ್ಲಾ? ಅದನ್ನು ಶೀವಳ್ಳಿಯವರೇ ಬರೆದರೆಂದು ಭಾವಿಸಿ ಅದರ ಸೇಡು ತೀರಿಸಿಕೊಳ್ಳಬೇಕೆಂದು ಅಹಿಚ್ಛತ್ರದವರೆಲ್ಲರೂ ಶೂದ್ರಸ್ತ್ರೀಯರನ್ನು ಮದುವೆಯಾಗಿ ಹುಟ್ಟಿದ ಶೂದ್ರಸ್ತ್ರೀ ಸಂತತಿಯವರೆಂದು ಸುಳ್ಳು ಇಂಗ್ಲಿಷ್ ಇತಿಹಾಸ ಬರೆದಿರುವುದು. ಇದೇ ಇತಿಹಾಸ ಸಂಶೋಧನೆ, ಎನ್ನುತ್ತಿರುವುದು. ಇದರಲ್ಲಿ ಎಷ್ಟು ಗೂಢಾರ್ಥ ಅಡಕವಾಗಿದೆ! ಆದರೆ ಪಾಟಾಳಿಗಳ ದಾಸೀಪುತ್ರತ್ವವು ಸಕಲ ದೇಶದ ಸಹ್ಯಾದ್ರಿ ಪುಸ್ತಕದಲ್ಲಿದೆ. ಭಾರತದಲ್ಲೆಲ್ಲಾ ಒಪ್ಪಿತ ವಿಷಯ. ತುಳುವರು ಶೂದ್ರಸಂತತಿಯವರೆಂಬುದು ಗುರುರಾಜ ಭಟ್ಟರ ಮತ್ತು ಅವರ ಗುರುಗಳಾದ ಥರಸ್ಟನ್ ಧೊರೆಗಳ ಉದ್ದೇಶಪೂರ್ವಕವಾದ ವಿಮರ್ಶೆಯ ಫಲವಾಗಿದೆ. ಥರಸ್ಟನ್‌ರದ್ದು ಬ್ರಾಮ್ಹಣ ಮುಖಂಡತ್ವವನ್ನು ಹಿಂದೂ ಸಮಾಜದಲ್ಲಿ ಅಳಿಸಿ ಕ್ರಿಶ್ಚಿಯನರನ್ನಾಗಿ ಮಾಡುವ ಉದ್ದೇಶವಾದರೆ ಭಟ್ಟರ ಉದ್ದೇಶ ಶೀವಳ್ಳಿಯವರಿಗೆ ಸ್ಥಾನಿಕರಿಗಿಂತ ಹೆಚ್ಚಿನ ಪಾವಿತ್ರ್ಯ ನಿರಾಕರಿಸಿ ಸ್ಥಾನಿಕರ ಸ್ಥಾನಮಾನ ವಿಸ್ತರಿಸುವುದಾಗಿದೆ. ಆನೆ ಹೋಗುತ್ತದೆ, ನಾಯಿ ಬಗಳುತ್ತದೆ, ಎಂಬಂತೆ ತಿಳಿದು ಉದಾಸೀನವಾಗುವುದು ಒಳಿತು. "ತಮ್ಮ ಹಿರಿಯರ ಕುಲ ಗೋತ್ರ ಜಾತಿಗಳನ್ನು ನಿಂದಿಸಲಿಕ್ಕಾಗಿಯೇ ತುಳುನಾಡು ಪುಸ್ತಕ ಬರೆದುದಾಗಿದೆ" ಎನ್ನಲು ಅಡ್ಡಿಯಿಲ್ಲ. ಬಹುಸಂಖ್ಯಾಕ ಬ್ರಾಮ್ಹಣೇತರರಿಗೆ ಓದಿ ತಮಾಷೆ ಮಾಡಲಿಕ್ಕೆ ಅನುಕೂಲವಾಯಿತು ಎಂಬ ಹೆಮ್ಮೆ. ಅದರಿಂದ ಆತ್ಮಗೌರವವೆಂಬ ಭಾವನೆ—ಇರಲಿ.

ಒಂದು ವೇಳೆ ನಂದಾಲಾಲ್ ಇವರು ಹೇಳಿದಂತೆ ಅಹಿಚ್ಛತ್ರವು ಪಾಂಚಾಲದ ಮುಖ್ಯ ರಾಜಧಾನಿಯಾಗಿದ್ದರೆ ಅದರ ಮೇಲೆ ಇತರ ದೇಶದ ರಾಜರ ಧಾಳಿಯಾಗಿ ಅಥವಾ ಇತರ ಉತ್ಪಾತಗಳಿಂದಾಗಿ ಅಲ್ಲಿದ್ದವರೆಲ್ಲಾ ಆ ದೇಶ ಬಿಟ್ಟು ಪ್ರಶಾಂತವಾಗಿದ್ದ ಗೋದಾವರೀ ತೀರದಲ್ಲಿ ಬಂದು ನಿಂತಿದ್ದರಿಂದ "ಯಾರ್ಕ್"ದಿಂದ ಹೋಗಿ ನೆಲೆಸಿದ್ದ ಮೂಲಕ ಅಮೇರಿಕಾದಲ್ಲಿ "ನ್ಯೂಯಾರ್ಕ್" ಆದಂತೆ ಗೋದಾ ತೀರದಲ್ಲಿ ಅಹಿಚ್ಛತ್ರವೊಂದು ಹೊಸತಾಗಿ ನಿರ್ಮಾಣವಾಯಿತು ಎಂದರೆ ತಪ್ಪೇನು? ವಸ್ತುತಃ ಉತ್ತರದ ಗಂಗಾತೀರದಲ್ಲಿದ್ದ ಅಹಿಚ್ಛತ್ರದ ವೈಶಿಷ್ಟ್ಯವನ್ನರಿತು ಅದರಂತೆ ದಕ್ಷಿಣದ ಗೋದಾ ತೀರದಲ್ಲಿ ಸಹ ದಾಕ್ಷಿಣಾತ್ಯರಿಂದ ಒಂದು ಅಹಿಚ್ಛತ್ರವು ರಚಿಸಲ್ಪಟ್ಟಿತ್ತು. ಮುಂದೆ ಕೆಲ ಸಮಯದ ನಂತರ ಅಲ್ಲಿದ್ದವರ ಪೈಕಿ ಕೆಲವರನ್ನು ಕರೆತರಿಸಿ, ಕೆಲವರು ವಲಸೆಹೋಗಿ, ಕೆಲವರು ದಾಳಿಯ ಪರಿಣಾಮದಿಂದ ನಿರ್ವಾಸಿತರಾಗಿ, ಬೇರೆ ಕಡೆ ಹೋದದ್ದರಿಂದ ಈಗ ಆ ಅಹಿಚ್ಛತ್ರವು ಲೋಪವಾಗಿದೆ. ಕೃಷ್ಣದೇವರಾಯನ ಕಾಲದಲ್ಲಿ ಜಗತ್ಪ್ರಸಿದ್ಧವಾದ ವಿಜಯನಗರ, ಕರ್ನಾಟಕ ಸಾಮ್ರಾಜ್ಯದ ರಾಜಧಾನಿ, ಈಗ ಎಲ್ಲಿದೆ? ತುಂಗಾ

ತೀರದ ವಿಜಯನಗರ ಇರಲೇ ಇಲ್ಲವೆನ್ನಲಾದೀತೇ? ಈಗ ಗಂಗಾತೀರದಲ್ಲಿ ಹಸ್ತಿನಾಪುರವು ಕಾಣಸಿಗುವುದಿಲ್ಲ. ಆದುದರಿಂದ ಹಸ್ತಿನಾಪುರ ಸುಳ್ಳು, ಅಲ್ಲಿದ್ದ ಕುರುಪಾಂಡವರು ಸುಳ್ಳು, ಮಹಾಭಾರತ ಸುಳ್ಳು ಎಂದು ಹೇಳಬೇಕೇ? ಇದ್ದ ಪರಿಸ್ಥಿತಿಗೆ ಅನುಗುಣವಾಗಿ ಉಪಪತ್ತಿ ಕಲ್ಪಿಸುವುದು ವಿಮರ್ಶಕರ ಕರ್ತವ್ಯ. ತಾವು ಕಲ್ಪಿಸಿದ ಉಪಪತ್ತಿಗೆ ಅನುಗುಣವಿಲ್ಲೆಂದು ಪ್ರಮಿತ ಪ್ರಮೇಯವನ್ನು ಅಲ್ಲಗಳೆಯಬಾರದು. ಹಾಗೆ ಅಲ್ಲಗಳೆಯುವುದು ಪದವೀಧರರ ಕರ್ತವ್ಯವೂ ಆಗಬಾರದು. ಆದ್ಯಂತ ತುಳುವ ದೇಶದಲ್ಲಿ ಎಲ್ಲ ಕಡೆಯ ಜನರು ಅಂದರೆ ಕೋಟ, ಹವೀಕ, ಶೀವಳ್ಳಿಯವರೆಂಬ ಭೇದವಿಲ್ಲದೆ ಒಂದೇ ತರದಲ್ಲಿ ಎಂದೆಂದಿಗೂ ಹೇಳುತ್ತಾರೆ, ಅಂದ ಮೇಲೆ ಅದು ಸತ್ಯವಿರಬೇಕೆಂದು ನಿಶ್ಚಯಿಸಿ ಪರಕೀಯನಾದರೂ ವಿವೇಕಶೀಲನಾದುದರಿಂದ ಬುಕ್ಕನನ್ನು ಅಹಿಚ್ಛತ್ರವು ಗೋದಾತೀರದಲ್ಲಿತ್ತು ಎಂದು ಗೃಹಿಸಿದನು. ಭಟ್ಟರಿಗೆ ಶೀವಳ್ಳಿಯವರನ್ನೂ, ಸಹ್ಯಾದ್ರಿ ಉತ್ತರ ಖಂಡವನ್ನೂ ತೆಗಳುವ ಭರದಲ್ಲಿ ವಿವೇಕಕ್ಕಾದರೂ ಇರಲು ಎಲ್ಲಿ ಅವಕಾಶವಿದೆ? ಸರ್ವಾನುಮತಿ ಎಂಬುದೊಂದು ಮಹಾಪ್ರಮಾಣ ಶಾಸ್ತ್ರದಲ್ಲಿ ಉಕ್ತವಾಗಿದೆ. ಆದುದರಿಂದ ಗೋದಾತೀರದಲ್ಲಿ ಅಹಿಚ್ಛತ್ರ ಉಂಟು ವ ಇತ್ತು, ಇದು ನಿಜ.

(ತು. ಪು. 90ರಲ್ಲಿ) ರೈಸಥೊರೆಗೆ ತಾಲ್ಗುಂದದಲ್ಲಿ ಸಿಕ್ಕಿದ ಶಾಂತಿವರ್ಮನ ಕಾಲದ ಶಾಸನದಲ್ಲಿ ಬರೆದ ಮಜಕೂರು ಪ್ರಕಾರ 1 ಮಯೂರವರ್ಮನಿದ್ದಾನೆ. 2. ಆತನ ಮಕ್ಕಳ ಪರಂಪರೆಯು ಇದೆ. ಅದರ 19 ಜನರ ಪಟ್ಟಿ ಕೊಟ್ಟದೆ. 3. ಆತನ ಪೂರ್ವಿಕರು 5 ಜನರು ಇದ್ದಾರೆ. ಇದರಿಂದ ಅದೊಂದು ಪ್ರಸಿದ್ಧವಾದ ಅನೇಕ ರಾಜರಿದ್ದ ಮನೆತನವಾಗಿತ್ತು. 4. ಮಯೂರವರ್ಮನು ಬಹು ಪರಾಕ್ರಮಿ ಇರುತ್ತಿದ್ದು ರಾಜಕಾರಣಪಟುವಾಗಿ ಕಂಚೀ ಪಲ್ಲವ ರಾಜ್ಯದ ಮೇಲೆ ಅನೇಕಾವರ್ತಿ ಧಾಳಿ ಮಾಡುತ್ತಾ ಪರಾಜಿತನಾಗದಿದ್ದುದರಿಂದ ಪಲ್ಲವರ ಮೆಚ್ಚಿಕೆ ಪ್ರಕಾರ ಬನವಾಸಿಯಲ್ಲಿ ರಾಜ್ಯಸ್ಥಾಪನೆ ಮಾಡಿದನು. 5. (ಪು. 101ರಲ್ಲಿ) ಬರೆದಂತೆ ರೈಸಥೊರೆಯ ಹೇಳಿಕೆ ಪ್ರಕಾರ ಮಯೂರವರ್ಮನ ಪೂರ್ವಜರು ಮುಕ್ಕಣ್ಣ, ಮಧುಕೇಶ್ವರ, ಮಲ್ಲಿನಾಥ, 1ನೇ ಚಂದ್ರವರ್ಮ, 2ನೇ ಚಂದ್ರವರ್ಮ ಹೀಗೆ 5 ಜನರು ಇದ್ದಾರೆ. ಇವರು ರಾಜ್ಯವಾಳುತ್ತಿದ್ದರು. ಇಲ್ಲದಿದ್ದರೆ 1ನೇ ಚಂದ್ರವರ್ಮ, 2ನೇ ಚಂದ್ರವರ್ಮ ಎಂಬ ಹೆಸರು ಯುಕ್ತವಾಗುವುದಿಲ್ಲ. ರಾಜ್ಯಮಾಡುವವರಿಗೆ 1ನೇ ಚಂದ್ರಗುಪ್ತ, 2ನೇ ಚಂದ್ರಗುಪ್ತ, 5ನೇ ಜಾರ್ಜ್, 7ನೇ ಎಡ್ವರ್ಡ್ ಹೀಗೆ ಹೆಸರು ಇರುವುದು ಸ್ವಾಭಾವಿಕವಾಗಿದೆ. ಆದುದರಿಂದ ಪೂರ್ವಜರು ರಾಜ್ಯವಾಳುತ್ತಿದ್ದರು ಎಂಬುದು ನಿಸ್ಸಂಶಯ. ಅಂದಮೇಲೆ ಮಯೂರವರ್ಮನ ತಂದೆ ಕಾಲದಲ್ಲಿ ಈ ರಾಜಮನೆತನವು ಯಾವುದೋ ಕಾರಣದಿಂದ ಪದಭ್ರಷ್ಟವಾಗಿರಬೇಕು. ಆಗ ಬ್ರಾಮ್ಹಣ ವೇಷದಿಂದ ತಲೆಮರೆಸಿಕೊಂಡು ಇರುತ್ತಿದ್ದು ತದನಂತರ ಪೂರ್ವೋಕ್ತಪ್ರಕಾರ ಮಯೂರವರ್ಮನಿಗೆ ಪುನಶ್ಚ ರಾಜ್ಯಸ್ಥಾಪನೆ ಮಾಡಬೇಕಾಯಿತು. ಇದರಿಂದ ಮಯೂರವರ್ಮನು ಬ್ರಾಮ್ಹಣನೆಂದು ಭಟ್ಟರಿಗೆ ತಪ್ಪು ತಿಳುವಳಿಕೆಯಾಗಿದೆ. ಸ್ವತಃ ಮಯೂರವರ್ಮನು ಬ್ರಾಮ್ಹಣನಲ್ಲ. ಹರಿತೀಪುತ್ರನೆಂಬ

ಹೆಸರು ಸಹ ಬ್ರಾಮ್ಹಣರಿಗೆ ಹೋಲುವಂಥಾದ್ದು ಅಲ್ಲ. ಇಂಥಾ ಹೆಸರು ಗೌತಮೀ ಪುತ್ರ, ಶತಕರ್ಣೀ ಇತ್ಯಾದಿ ಆಂಧ್ರ ರಾಜರಲ್ಲಿ ಕಂಡು ಬಂದಿರುತ್ತದೆ. ಪಾಂಡವರು ಏಕಚಕ್ರ ನಗರದಲ್ಲಿ ತಲೆಮರೆಸಿಕೊಂಡು ಇರುತ್ತಿದ್ದಂತೆ ಕೆಲವು ಸಮಯ ಬ್ರಾಮ್ಹಣ ರಾಗಿ ಇರುತ್ತಿದ್ದುದರಿಂದ ಬ್ರಾಮ್ಹಣರೆಂಬ ಪ್ರಸಿದ್ಧಿಯು ಲೋಕದಲ್ಲಿ ಹರಡಿತ್ತು. ಪ್ರಾಯಶಃ ಇವರು ಆಂಧ್ರರಾಜರ ವಂಶದವರೇ ಆಗಿರುತ್ತಿದ್ದು ಮುಂದೆ ಕರ್ನಾಟಕದಲ್ಲಿ ರಾಜ್ಯಸ್ಥಾಪನೆ ಮಾಡಿದರೆಂಬುದು ಸೂಕ್ತವಾಗುತ್ತದೆ. ಆದುದರಿಂದಲೇ ಪೂರ್ವಪರಿ ಚಿತರಾದ ಗೋದಾತೀರದ ಬ್ರಾಮ್ಹಣರನ್ನು ತರಿಸಿದನೆನ್ನುವದೂ ಯುಕ್ತವಾಗುತ್ತದೆ. ಮತ್ತು ತುಳು ಗ್ರಾಮಪದ್ಧತಿಯ ಪ್ರಕಾರ ಮಯೂರವರ್ಮನ ತಂದೆಯು ಮಣಿವರ್ಮ ನೆಂಬವನಿದ್ದಾನೆ. ಅದಕ್ಕಿಂತ ಪೂರ್ವಜರು ಚಂದ್ರವರ್ಮ 1—2 ಹೀಗೆ ವರ್ಮಾಂತ ನಾಮಧಾರಿಗಳಾದ್ದರಿಂದ "ವರ್ಮಾಂತಂ ಕ್ಷತ್ರಿಯಸ್ಯ" ಎಂಬ ಪ್ರಮಾಣದಿಂದ ಇವರ ಮನೆತನ ಕ್ಷತ್ರಿಯ ಜಾತಿಗೆ ಸೇರಿದ್ದಾಗಿದೆ ಎಂದು ತೀರ್ಮಾನಿಸಲು ಅವಕಾಶ ಉಂಟು.

ಕಂಚಿಯಲ್ಲಿ ನಡೆದ ಅಶ್ವಮೇಧಯಾಗ ಒಂದರಲ್ಲಿ ಬ್ರಾಮ್ಹಣರಿಗೆ ಅಪಮಾನ ವಾದುದನ್ನು ಕಂಡು ಪ್ರತೀಕಾರಬುದ್ಧಿ ಉತ್ಪನ್ನವಾದದ್ದು, ಕ್ಷತ್ರಿಯರ ಪರಾಕ್ರಮ ತಾಳಿದ್ದು, ರಾಜ್ಯದ ಮೇಲೆ ದಾಳಿಮಾಡಿದ್ದು, ರಾಜ್ಯ ಸ್ಥಾಪನೆಮಾಡಿದ್ದು, ಇವೇ ಮೊದಲಾದ ಕ್ಷಾತ್ರಧರ್ಮಗಳಿಂದ ಸಹ ಕ್ಷತ್ರಿಯನೆಂದು ತಿಳಿದುಕೊಳ್ಳಲು ಸಾಧ್ಯವಿದೆ.

(ತು. ಪು. 91ರಲ್ಲಿ) ಸದರಿ ಮನೆತನದ ಕಾಕುಸ್ಥನೆಂಬ ರಾಜನು ಗುಪ್ತರಾಜರ ಮತ್ತು ಪಾರ್ಥಿವ ರಾಜರ ಕುಟುಂಬಗಳಿಗೆ ತನ್ನ ಪುತ್ರಿಯರನ್ನು ವಿವಾಹ ಮಾಡಿಸಿ ದನು ಎಂಬುದಾಗಿ ಸದರಿ ಕಾಕುಸ್ಥನ ಮಗನಾದ ಶಾಂತಿವರ್ಮನಿಂದ ಕೆತ್ತಿಸಿದ ಶಾಸನ ದಿಂದ ತಿಳಿಯುತ್ತದೆ. ಆಗ ಕದಂಬರು ತಾವು ಸ್ವತಃ ಬ್ರಾಮ್ಹಣರಿದ್ದು ಬ್ರಾಮ್ಹಣೇ ತರರ ಕೂಡ ವಿವಾಹ ಸಂಬಂಧವಿಟ್ಟುಕೊಳ್ಳುವಷ್ಟು ಭ್ರಷ್ಟರಾಗಿರುವರೇ? ಗೋ-ಬ್ರಾಮ್ಹಣ ಧರ್ಮಪ್ರತಿಪಾಲಕರೆಂಬ ಬಿರುದು ಇಟ್ಟುಕೊಂಡು ಧರ್ಮಭ್ರಷ್ಟಕೆಲಸ ಮಾಡುವರೇ? ವಿಚಾರ ಮಾಡಬೇಕು. ಮತ್ತು ರಘು, ಕಾಕುಸ್ಥ, ಭಗೀರಥ ಎಂಬಿ ತ್ಯಾದಿ ಆ ವಂಶದ ರಾಜರ ಹೆಸರು ಆ ವಂಶವು ಸೂರ್ಯವಂಶವೆಂಬುದನ್ನು ಸೂಚಿಸು ತ್ತದೆ. ಮಯೂರವರ್ಮನು ತಾನು "ಗೋಬ್ರಾಮ್ಹಣ ಧರ್ಮಪ್ರತಿಪಾಲಕ" ಎಂಬ ಕ್ಷತ್ರಿಯ ಧರ್ಮವನ್ನು ಅವಿಚ್ಛಿನ್ನವಾಗಿ ಲೋಪವಿಲ್ಲದೆ ಸಂರಕ್ಷಿಸಿದನು" ಎಂಬುದು ಆತನ ಚರಿತ್ರೆಯಿಂದ ತಿಳಿಯುತ್ತದೆ.

ಆತನು ಕೇವಲ ಸಾದಾ ಕ್ಷತ್ರಿಯನಲ್ಲ ಸೂರ್ಯವಂಶಕ್ಕೆ ಸೇರಿದ ಕ್ಷತ್ರಿಯನು ಅದು "ರವಿವಂಶಸಮುದ್ಭವಃ" ಎಂಬ ಸಹ್ಯಾದ್ರಿಯ ವಾಕ್ಯದಿಂದ ಸಿದ್ಧವಾಗುತ್ತದೆ. ಯದ್ಯಪಿ "ನಂದಾಂತಂ ಕ್ಷತ್ರಿಯಕುಲಂ" ಎಂಬ ಪ್ರಮಾಣದಂತೆ ಪರಿಶುದ್ಧವಾದ ಸೂರ್ಯವಂಶವು ನಷ್ಟವಾಗಿದ್ದರೂ ಅಥವಾ ಸೂರ್ಯವಂಶದ ಕ್ಷತ್ರಿಯ ರಾಜರ ಮನೆ ತನವು ನಷ್ಟವಾದರೂ, ಸಾದಾ ಕ್ಷತ್ರಿಯರು, ನೌಕರರು, ಯೋದ್ಧರಾಗಿದ್ದವರು, ಉಳಿ ದಿರಲಾರರೇ! ಸಣ್ಣ ಉಪರಾಜರಾಗಿದ್ದವರು ಸಹ ಉಳಿಯಲಾರರೇ? ಪ್ರಮಾಣವಿದೆ,

ಸಂಭವವಿದೆ. ಕಾರಣ ಮಯೂರವರ್ಮನು ಕ್ಷತ್ರಿಯನು. ಇದರಲ್ಲಿ ಸಂಶಯ ಬೇಡ. ಆತನು ಸೂರ್ಯವಂಶದ ಕ್ಷತ್ರಿಯನಲ್ಲ ಕ್ಷತ್ರಿಯನೂ ಅಲ್ಲ ಎನ್ನಲು ಏನು ಆಧಾರವಿದೆ? (ಪು. 90ರಲ್ಲಿ) ಬರೆದ ಮಾನವ್ಯ ಗೋತ್ರವೆಂಬುದು ಬ್ರಾಹ್ಮಣ್ಯ ಸಾಧಕವಲ್ಲ. ಮನುವಿನ ಗೋತ್ರ ಮಾನವ್ಯ ಗೋತ್ರ. ಅದು ಸೂರ್ಯವಂಶವನ್ನು ಸೂಚಿಸುತ್ತದೆ. ಬ್ರಾಹ್ಮಣನೆಂಬ ಹೆಸರು ಬ್ರಾಹ್ಮಣವೇಷ ಧರಿಸಿದ್ದರಿಂದ ಪ್ರಾಪ್ತ ವಾಯಿತು ಎಂದು ಹೇಳಲು ಬರುತ್ತದೆ. ಕಾರಣ ನಿರ್ಧಾರ ಹೇಗೆ? ಹೇತು ಅನ್ಯಥಾ ಸಿದ್ಧ ವಾಯಿತು? ಸಹ್ಯಾದ್ರಿ ದ್ವೇಷವು ಭಟ್ಟರನ್ನು "ಮಯೂರವರ್ಮನು ಬ್ರಾಹ್ಮಣನೆಂದು ಸಾಧಿಸುವಂತೆ ಪ್ರಚೋದನೆ ಮಾಡುತ್ತದೆ. ಅಂತೂ ಸೂರ್ಯವಂಶ ಕ್ಷತ್ರಿಯನೆಂದು ಸ್ಪಷ್ಟ ನಿರ್ಧಾರಾತ್ಮಕ ಪ್ರಮಾಣವಿದೆ. ಆದರೆ ಕ್ಷತ್ರಿಯನೇ ಅಲ್ಲವೆನ್ನಲು ಸ್ಪಷ್ಟ ಪ್ರಮಾಣವಿಲ್ಲ. ಅಸ್ಪಷ್ಟ ಪ್ರಮಾಣವೂ ಇಲ್ಲ. ಭಟ್ಟರ ಅಪೇಕ್ಷೆ ಮಾತ್ರ ಇದೆ. ಆದುದರಿಂದ (ಪು. 100ರಲ್ಲಿ) "ದಕ್ಷಿಣ ಹಿಂದೂಸ್ಥಾನದ ಅರಸರಲ್ಲಿ ತಾವು ಉತ್ತರ ರಾಜಕುಟುಂಬಗಳಿಗೆ ಸಂಬಂಧಿಸಿದವರೆಂಬ ಒಂದು ತರದ ಭಾವನೆಯನ್ನು ವ್ಯಕ್ತಪಡಿ ಸುವ ಹವ್ಯಾಸ ಬೆಳೆದಿತ್ತೆಂದು" ಭಟ್ಟರು ಬರೆಯುತ್ತಾರೆ. ಅದು ತಮ್ಮಂಥಾ ಪದವೀ ಧರರಲ್ಲಿ ಭಾರತದ ಮಹಾಪುರುಷರನ್ನು ಅವಮಾನಗೊಳಿಸಿ ವಿಪರ್ಯಸ್ತ ಸ್ವರೂಪ ವನ್ನು ಜನರ ಮುಂದೆ ಇಡುವ ಹವ್ಯಾಸವು ಬೆಳೆಯುತ್ತಿದೆ ಎಂದು ಹೇಳುವಂಥಾ ದ್ದಾಗಿದೆ. ಅಂತೂ ಮಯೂರವರ್ಮನು ಶರ್ಮನಲ್ಲ, ಬ್ರಾಹ್ಮಣನಲ್ಲ, ಬ್ರಾಹ್ಮಣ ಭಕ್ತನು, ಕ್ಷತ್ರಿಯನು, ಸೂರ್ಯವಂಶದ ಕ್ಷತ್ರಿಯನು, ಬ್ರಾಹ್ಮಣ ಪರಿಪಾಲಕನು, ಇದು ನಿಜ.

(ತು. ಪು. 91ರಲ್ಲಿ) "ಬನವಾಸಿ ಕದಂಬರು ಬ್ರಾಹ್ಮಣ್ಯಕ್ಕೆ ವಿಶೇಷ ಪ್ರೋತ್ಸಾಹ ವನ್ನಿತ್ತರು, ಎಂಬ ವಿಷಯದಲ್ಲಿ ಎರಡು ಮಾತು ಇರಲಾರದು." "ಮಯೂರ ವರ್ಮನು ರಾಜ್ಯ ಸ್ಥಾಪನೆ ಮಾಡಿದಂದಿನಿಂದ ಉತ್ತರ ಭಾರತದಿಂದ ಬ್ರಾಹ್ಮಣ ತಂಡಗಳನ್ನು ವಲಸೆ ಬರಲು ಪ್ರೋತ್ಸಾಹವಿತ್ತನು." "ಹಾಗೆ ವಲಸೆ ಬಂದವರನ್ನು ತನ್ನ ರಾಜ್ಯದಲ್ಲಿ ನೆಲೆಗೊಳಿಸಿದನು, ಎಂದು ಧಾರಾಳವಾಗಿ ಹೇಳಬಹುದು." ಎಂಬ ಈ ಮಾತುಗಳಿಂದ ಮಯೂರವರ್ಮನು ತನ್ನ ರಾಜ್ಯದಲ್ಲಿ ಬ್ರಾಹ್ಮಣರನ್ನು ನೆಲೆಸಿದನು. ಇದರಲ್ಲಿ ಭಟ್ಟರಿಗೆ ಭಿನ್ನಾಭಿಪ್ರಾಯವಿಲ್ಲ. ಬ್ರಾಹ್ಮಣರನ್ನು ನೆಲೆಸಿದ್ದು ನಿಜ. ನೆಲೆಸು ವುದೆಂದರೆ ಜೀವನೋಪಾಯ ಕಲ್ಪಿಸಿ ಮನೆ, ಅಗ್ರಹಾರ, ಕಟ್ಟಿಕೊಟ್ಟು ಕುಳ್ಳಿರಿಸು ವುದು. ಅದಿಲ್ಲದಿದ್ದರೆ ಪ್ರೋತ್ಸಾಹವೇನು ಮಾಡಿದಂತಾಗುತ್ತದೆ? ಅನುಕೂಲತೆಯನ್ನು ಕಲ್ಪಿಸಿಲ್ಲವಾದರೆ ವಲಸೆ ಏಕೆ ಬರುತ್ತಾರೆ? ಆದುದರಿಂದ ಉಂಬಳಿ, ಭೂದಾನ, ಧನ ಕನಕದಾನ. ವಗ್ಯೆರೆ ಕೊಟ್ಟಿರಬೇಕು. ಅದರಿಂದ ಪ್ರೋತ್ಸಾಹಿತರಾಗಿ ಬಂದಿದ್ದಾರೆ ಎಂಬುದು ನಿಜ.

ಬರುವ ಬ್ರಾಹ್ಮಣರು ಆಮಂತ್ರಿತರಾಗಿ ಬಂದರೊ? ತಾವಾಗಿ ಬಂದರೊ? ಎಂಬ ಪ್ರಶ್ನೆ ಇದೆ. ಈ ಪ್ರಶ್ನೆಯನ್ನೂ ಭಟ್ಟರು ಪು. 232ರಲ್ಲಿ "ಕದಂಬ ರಾಜನಾದ

ಮುಕ್ಕಣ್ಣನು ತನ್ನ ರಾಜ್ಯದಲ್ಲಿ ಯಾವ ಬ್ರಾಮ್ಹಣರೂ ಇಲ್ಲದುದನ್ನು ಕಂಡು ಉತ್ತರ ಅಹಿಚ್ಛತ್ರ ಅಗ್ರಹಾರದಿಂದ ಅನೇಕ ಬ್ರಾಮ್ಹಣರ ಕುಟುಂಬಗಳನ್ನು ತರಿಸಿ ಸ್ಥಾನ ಗುಂದೂರು ಅಗ್ರಹಾರದಲ್ಲಿ ನೆಲೆಸಿದನು." ಎಂದು ಬರೆದು ಮೈಸೂರು ಗಜೇಟಿಯರ್, ಐತಿಹ್ಯ, ಕೆಲ ಶಾಸನಗಳು ಈ ಆಧಾರದ ಮೂಲಕವಾಗಿ ಸ್ಥಿರಪಡಿಸುತ್ತಾರೆ. ಅಂದರೆ ತಾವಾಗಿ ಬಂದವರಲ್ಲ. ಬೇಕು ಅಂತ ಆಮಂತ್ರಿಸಿ ಕರೆದಿದ್ದುದರಿಂದ, ಬಂದವರು. ಇದು ನಿಶ್ಚಿತವಾಯಿತು.

(ಪು. 104) ಕ್ರಿ. ಶ. 12ನೇ ಶತಕದ ಶಾಸನ ತಿಳಿಸುವಂತೆ ಬಂದ ಬ್ರಾಮ್ಹಣರು 12 ಸಾವಿರ ಮತ್ತು ಅಹಿಚ್ಛತ್ರದಿಂದಲೇ ಬಂದುದು ಎಂದು ಗೊತ್ತಾಗಿದೆ. ಇನ್ನು ಅದರಲ್ಲಿ ಸಂಶಯ ಬೇಡ. ಅಹಿಚ್ಛತ್ರವು ಒಂದೇ ಎಂದೂ, ಎಲ್ಲಿದೆಯೆಂದು ಗೊತ್ತಿಲ್ಲ ವೆಂದೂ, ಭಟ್ಟರು ಒಪ್ಪಿದ್ದಾರೆ. ಆದರೆ ಗಂಗಾತೀರದಲ್ಲೊಂದು ಗೋದಾವರೀ ತೀರ ದಲ್ಲೊಂದು ಹೀಗೆ 2 ಇತ್ತು. ಗೋದಾವರೀ ತೀರದ ಅಹಿಚ್ಛತ್ರದಿಂದ ಬಂದದ್ದು ಎಂದು ಇದರ ಮೊದಲು ಗೊತ್ತುಹಚ್ಚಲಾಗಿದೆ. ಭಟ್ಟರು ಒಪ್ಪಿಲ್ಲವಾದರೆ ಬಿಡಲಿ, ಅದರಿಂದ ಹಾನಿಯಿಲ್ಲ. ಅಂತೂ ಗೋದಾವರೀ ತೀರದ ಅಹಿಚ್ಛತ್ರದ ಪರಿಚಯವಿಲ್ಲದ ಕಾರಣ ಭಟ್ಟರು ಉತ್ತರಪಾಂಚಾಲ, ಉತ್ತರಭಾರತ, ಇತ್ಯಾದಿ ಶಬ್ದಗಳನ್ನು ಬರೆಯುತ್ತಾರೆ.

(ಪು. 69ರಲ್ಲಿ) "ಕದಂಬರು ಬನವಾಸಿಯಲ್ಲಿ ಆಳತೊಡಗಿದೊಡನೆ ರಾಜಧಾನಿಯು ತುಳುವದ ಉತ್ತರಭಾಗದಲ್ಲಿಯೇ ಇದ್ದುದರಿಂದ ಅವರು ತಮ್ಮ ಸಾಮ್ರಾಜ್ಯ ವನ್ನು ಪಯಸ್ವಿನೀ ತನಕ ವಿಸ್ತರಿಸಿದರು. ಅವರ ವರ್ಚಸ್ಸು ಕೇರಳಕ್ಕೂ ಮುಟ್ಟಿತ್ತು. ಅವರು ತಮ್ಮ ಸಂಬಂಧಿಕರನ್ನು ಉಪರಾಜರಾಗಿ ನೇಮಿಸಿದರು. ತಮ್ಮ ಬ್ರಾಮ್ಹಣ ರನ್ನು 32 ಗ್ರಾಮುಗಳಲ್ಲಿ ಅಲ್ಲಲ್ಲಿ ನಡುವೆ ತಮ್ಮ ಹಿತಚಿಂತಕರಾಗಿ ನೇಮಿಸಿದರು" ಹೀಗೆ ಬರೆದುದರಿಂದ ಬ್ರಾಮ್ಹಣರನ್ನು ತಾಲಗುಂದದಲ್ಲಿ ಮಾತ್ರವಲ್ಲದೆ ಗೋಕರ್ಣದಿಂದ ಪಯಸ್ವಿನೀ ತನಕ 32 ಗ್ರಾಮುಗಳಲ್ಲಿ ನೆಲೆಸಿದ್ದಾರೆಂದು ಸಹ ಭಟ್ಟರು ಬರೆದು ಒಪ್ಪಿ ದ್ದಾರೆಂದಾಯಿತು. ಇದರಂತೆ ತಾಲಗುಂದದಿಂದ 60 ಕುಟುಂಬಗಳನ್ನು ದಕ್ಷಿಣ ಮೈಸೂರು ಕಡೆ ನಿಲ್ಲಿಸಿದ್ದರಿಂದ ಅವರು 60 ಒಕ್ಕಲು ಎಂಬ ಹೆಸರುವಾಸಿಯಾದ ಮೈಸೂರು ಕಡೆಯ ಬ್ರಾಮ್ಹಣರಾಗಿದ್ದಾರೆ. 6 ಸಾವಿರ ಎಂಬ ಅರ್ಥದ ಆರುವೇಲು ಎಂಬ ಹೆಸರಿನ ಬ್ರಾಮ್ಹಣರು ಕನ್ನಡ ದೇಶದಲ್ಲಿ ಇರುತ್ತಿದ್ದಾರೆ. (6 ವೇಲು=6 ಸಾವಿರ). ಇದು ತೆಲುಗು ಶಬ್ದ, ಇದರಿಂದ ಸಹ ಆಂಧ್ರದ ಅಹಿಚ್ಛತ್ರವೆಂದು ನಿರ್ಧರಿಸಬಹುದು. ಪ್ರಕೃತ ತಾಲಗುಂದದಲ್ಲಿ ಮಾತ್ರ ಬ್ರಾಮ್ಹಣರಿಗೆ ಅಗ್ರಹಾರ ಕಟ್ಟಿಕೊಟ್ಟಿದ್ದಲ್ಲ, ತುಳುವ ದಲ್ಲಿ ಸಹ 32 ಗ್ರಾಮುಗಳಲ್ಲಿ ಅಗ್ರಹಾರಗಳನ್ನು ಕಟ್ಟಿಕೊಟ್ಟು ಹಿತಚಿಂತಕರಾಗಿ ಇರ ಬೇಕೆಂದು ಕರೆತರಿಸಿ ನಿಲ್ಲಿಸಲಾಗಿತ್ತು. ಇನ್ನು ಇದರ ಉಪಪಾದನೆ ಸಾಕು. ಇದಿಷ್ಟೇ ವಿಷಯ 8ನೇ ಅಧ್ಯಾಯದ 2, 12ನೇ ಶ್ಲೋಕಗಳಲ್ಲಿ ಉಕ್ತವಾಗಿದೆ. ಆದುದರಿಂದ ಇದು ಸುದೃಢವಾಯಿತು. ಭಟ್ಟರೂ ಒಪ್ಪಿದ್ದಾಗಿದೆ. ಇನ್ನು ಈ ತತ್ವವನ್ನು ಬಿಡಬೇಕಾಗಿಲ್ಲ.

ಪು. 108 ಕ್ರಿ. ಶ. 904ನೇ ಶಾಸನದಿಂದ "ಅಹಿಚ್ಛತ್ರವು ಯತಿಗಳ ಕೇಂದ್ರ-
ಬ್ರಹ್ಮನ ಸ್ಥಾನ, ಅಲ್ಲಿದ್ದವರು ವಿದ್ವಾಂಸರೂ, ಶೀಲಸಂಪನ್ನರೂ, ಬಲ್ಲಿದರೂ ಆಗಿದ್ದರು.
ಇದರಿಂದ ಉತ್ತರ ಸಹ್ಯಾದ್ರಿಯ 8ನೇ ಅಧ್ಯಾಯದ ಪೂರ್ವೋದಾಹೃತ ಶ್ಲೋಕಗಳಲ್ಲಿ
ಅಹಿಚ್ಛತ್ರದವರನ್ನು ವರ್ಣಿಸಿದ್ದು ಯಥಾರ್ಥವೆಂದು ಸಿದ್ಧವಾಯಿತು. ಪಾಪಭೂಯಿಷ್ಠ
ವಾದ ದಕ್ಷಿಣ ದೇಶವನ್ನು ಪಾಪದಿಂದ ವಿಮುಕ್ತಗೊಳಿಸಿ ಪರಿಶುದ್ಧ ಮಾಡಲು ಬಂದಿ
ದ್ದಾರೆ. ಅಂತೂ ಇದರಿಂದ ಅಹಿಚ್ಛತ್ರದವರು ಸರ್ವಶ್ರೇಷ್ಠರಿದ್ದರು. ಇವರಲ್ಲಿ ಭಟ್ಟರಿಗೆ
ಸಂಶಯವಿರಲಾರದು.

ಪು. 101 ಮಯೂರವರ್ಮನ ತಂದೆ ಯಾರು? ಎಂಬ ಪ್ರಶ್ನೆ ಒಂದು ಎದ್ದು
ಬಂದಿದೆ. ತುಳು ಗ್ರಾಮಪದ್ಧತಿಯಲ್ಲಿ ಒಂದು ಕಡೆ ಮಣಿವರ್ಮನೆಂದು ಬರೆದಿದೆ.
ಆದರೆ ಅದು ಗ್ರಾಹ್ಯವಲ್ಲ. ಗ್ರಾಮಪದ್ಧತಿ ಇತಿಹಾಸವಲ್ಲ ಎಂದು ಭಟ್ಟರು ಅದನ್ನು
ತ್ಯಾಜ್ಯ ಮಾಡಿದ್ದಾರೆ. ಉತ್ತರ ಸಹ್ಯಾದ್ರಿಯಲ್ಲಿ ಹೇಮಾಂಗದ ಕುಮಾರಕ ಎಂದು
ಬರೆದುದರಿಂದ ಹೇಮಾಂಗದನೆಂದು ತಿಳಿಯಬಹುದು. ಆದರೆ ಭಟ್ಟರು ಅದನ್ನು ಚರಿತ್ರೆ
ಅಲ್ಲವೆಂದು ತ್ಯಾಜ್ಯ ಮಾಡಿದ್ದಾರೆ. ಪು. 103 ಕ್ರಿ. ಶ. 1160ನೇ ಶಾಸನದಿಂದ ರುದ್ರ
ನಿಗೂ, ಭೂಮಿದೇವಿಗೂ ಕದಂಬ ವೃಕ್ಷದ ಕೆಳಗೆ ಶತ್ರುಗಳನ್ನು ಸದೆಬಡಿದು ಓಡಿಸುವ
ಅಧೀನ ಸಾಮಂತರಿಂದ ಗೌರವಪಡೆವ ಮಯೂರವರ್ಮನು ಹುಟ್ಟಿದನು. ಆತನ 3ನೇ
ಕಣ್ಣು ಹಣೆಯಲ್ಲಿದ್ದುದರಿಂದ ಆತ ಮುಕ್ಕಣ್ಣ ಎಂದಾದನು. ಕ್ರಿ. ಶ. 1077ನೇ
ಶಾಸನದಿಂದ ಆತನ ಹೆಸರು ತ್ರಿಲೋಚನ ಎಂದು ಗೊತ್ತಾಗುತ್ತದೆ. ಕ್ರಿ. ಶ. 1198ನೇ
ಶಾಸನ ಸಹ ಹರನಿಗೂ, ಭೂದೇವಿಗೂ ಜನಿಸಿದನು ಎಂದು ಹೇಳುತ್ತದೆ. ಆದರೂ
ಭೂಲೋಕದ ತಂದೆ-ತಾಯಿ ಇಲ್ಲದೆ ಹುಟ್ಟುವುದೆಂದರೆ ಹೇಗೆ? ಅರ್ಥವಾಗುವುದಿಲ್ಲ
ಭಟ್ಟರಿಗೆ. ದಾಖಲೆ ಏನೋ ಇದೆಯೆಂದು ಸಮಾಧಾನಪಟ್ಟರೂ ರೈಸುಥೊರೆಗಳು
ಪೂರ್ವಿಕರ ಕುರಿತು 5 ಹೆಸರನ್ನೇ ಕೊಟ್ಟರು ಹೊರತು ತಂದೆಯ ಹೆಸರು ಕೊಟ್ಟಿರುವು
ದಿಲ್ಲ. ತಂದೆಯ ಹೆಸರಿಗೆ ಚರಿತ್ರೆ ಇಲ್ಲ. ಆದುದರಿಂದ ಚಾರಿತ್ರಿಕವಾಗಿ ಮಯೂರ
ವರ್ಮನಿಗೆ ತಂದೆ ಇರುವುದಿಲ್ಲ. ಇದು ಭಟ್ಟರ ಅಭಿಪ್ರಾಯವಾಗಿದೆ. ಆದರೆ ಮಯೂರ
ವರ್ಮನಿದ್ದಾನೆಂದ ಮೇಲೆ ಅವನಿಗೆ ತಂದೆ ತಾಯಿ ಇರಬೇಕಲ್ಲವೇ? ಆತನ ಪೂರ್ವಜರು
5 ಜನರು ಭೂಲೋಕದವರೇ ಇರುವುದರಿಂದ ರುದ್ರನ ಮಗನೂ ಇರಲಾರನು. ಆತನ
ತಂದೆಯು ರಾಜ್ಯವಾಳಲಿಲ್ಲವಾದ್ದರಿಂದ ಪ್ರಸಿದ್ಧಿ ಇಲ್ಲದೆ ಶಾಸನಾದಿಗಳಲ್ಲಿ ಆತನ
ಹೆಸರು ಪ್ರಸಿದ್ಧಿಯಾಗಲಿಲ್ಲ. ಆದರೂ ಸಹ್ಯಾದ್ರಿ ಉತ್ತರಖಂಡದಂತೆ ತುಳು ಗ್ರಾಮ
ಪದ್ಧತಿಯಂತೆ ಹೇಮಾಂಗದ, ಮಣಿವರ್ಮ ಹೀಗೆ 2 ಹೆಸರುಳ್ಳ ತಂದೆ ಇದ್ದಾನೆ.
ಸುಶೀಲಾ ಎಂಬ ತಾಯಿ ಇದ್ದಾಳೆ. ಮುಕ್ಕಣ್ಣ, ತ್ರಿಲೋಚನ, ಮಯೂರವರ್ಮ
ಎಂದು 3 ಹೆಸರುಳ್ಳ ಮಗ ಹುಟ್ಟಿದ್ದಾನೆ. ಚಂದ್ರಾಂಗದ, ಕಂಗವರ್ಮ ಎಂದು 2 ಹೆಸ
ರುಳ್ಳ ಮೊಮ್ಮಗ ಆಗಿದ್ದಾನೆ. ಹೀಗೆ ಒಪ್ಪಲು ಅಡ್ಡಿಯಿಲ್ಲ. ದುರಾಗ್ರಹ ಮಾತ್ರ
ಇರಬಾರದು. ಇಂಥಾ ಕ್ಷುಲ್ಲಕ ಕಾರಣದಿಂದ ಸಹ್ಯಾದ್ರಿ ಅಪ್ರಮಾಣವಾಗಲಾರದು.

ಇಷ್ಟರ ವರೆಗೆ ಭಟ್ಟರ ಮನಸುಗಳಿಂದ ಸಹ್ಯಾದ್ರಿಯಲ್ಲಿ ಪ್ರತಿಪಾದಿಸಿದ ವಿಷಯಗಳನ್ನು ವಿವರಿಸಿ ಭಟ್ಟರ ಲೇಖನಿಯಿಂದಲೇ ಉತ್ತರ ಸಹ್ಯಾದ್ರಿಯ ಪ್ರಾಮಾಣ್ಯವನ್ನು ಸಮರ್ಥಿಸಿದ್ದಾಯಿತು. ಅಂದರೆ ಸಹ್ಯಾದ್ರಿಯ ವಿಷಯಗಳನ್ನು ಒಪ್ಪಿದ್ದಾರೆಂದು ತೋರಿಸಿಕೊಟ್ಟದ್ದಾಯಿತು. ಇನ್ನು ಸ್ಥಾನಿಕರ ಪಕ್ಷ ಹಿಡಿದು ಶಿವಳ್ಳಿಯವರನ್ನು ತೆಗಳಲು ಅಸಮರ್ಥನೀಯ ವಿಷಯಗಳನ್ನು ಪ್ರತಿಪಾದಿಸಿ ಹೇಗೆ ಗ್ರಂಥ ಬೆಳೆಸುತ್ತಾರೆ ಎಂಬುದನ್ನು ದಿಗ್ದರ್ಶನ ಮಾಡಲಾಗುತ್ತದೆ.

1. (ಪು. 113ರಲ್ಲಿ) "ತುಳುನಾಡಿನ ಬ್ರಾಹ್ಮಣರಲ್ಲಿ ಮೊದಲಿಗರು ಸ್ಥಾನಿಕರು. ಸ್ಥಳಮಂದಿಕರಾದ ಸ್ಥಾನಿಕರೇ ಪರಶುರಾಮನ ಕಾಲದ (ತ್ರೇತಾಯುಗದ) ಇಲ್ಲಿಯ ಬ್ರಾಹ್ಮಣರಿರಬೇಕು. ಉಂಬಳಿ ಪಡೆದವರು ತುಳುನಾಡಿನಲ್ಲಿ ಸ್ಥಾನಿಕರು ಮಾತ್ರ, ಬೇರೆ ಯಾವ ಬ್ರಾಹ್ಮಣರೂ ಉಂಬಳಿಪಡೆದುದು ತಿಳಿಯುವುದಿಲ್ಲ" (ಇಲ್ಲ). ಹೀಗೆ ಸಿದ್ಧಾಂತ ಮಾಡಿದ್ದಾರೆ. ಮತ್ತು 1 ಸ್ಥಾನಿಕರೇ ಮೊದಲಿಗರು, 2 ಅವರಿಗೇ ಉಂಬಳಿ ಕೊಟ್ಟದ್ದು ಎಂಬ ಸ್ವಕಲ್ಪಿತ ಸಿದ್ಧಾಂತವನ್ನು ಕಾಪಾಡಲು ಇನ್ನೂ ಅನೇಕ ಉಪಸಿದ್ಧಾಂತಗಳನ್ನು ಕಲ್ಪಿಸುತ್ತಾರೆ.

2. (ಪು. 101ರಲ್ಲಿ) "ಮಯೂರವರ್ಮನು ಕೈಗ, ಶೌಳವ, ಕೇರಳಗಳಲ್ಲಿ ಅಹಿಚ್ಛತ್ರದಿಂದ ಬ್ರಾಹ್ಮಣರನ್ನು ತರಿಸಿ ಭೂಮಿಯನ್ನು ದಾನಮಾಡಿ ನೆಲೆಸಿದನು ಎಂಬುದೂ, ಚರಿತ್ರೆಗೆ ಅರ್ಹವಾಗಿಲ್ಲವೆನ್ನುತ್ತಾರೆ. ಹಾಗೆ ಕರೆಸಿ ಭೂಮಿ ದಾನ ಕೊಟ್ಟದ್ದೇ ಆದರೆ ತುಳುನಾಡಿನಲ್ಲಿ ಉಂಬಳಿ ಪಡೆದವರು ಸ್ಥಾನಿಕರೇ ಎಂಬ ಭಟ್ಟರ ಸಿದ್ಧಾಂತಕ್ಕೆ ಹಾನಿತಟ್ಟುತ್ತದೆ. ಆದುದರಿಂದ "ಚರಿತ್ರೆಗೆ ಅರ್ಹವಲ್ಲ" ಎಂದು ಬರೆದು ಅಲ್ಲಗಳೆಯುತ್ತಾರೆ ಮತ್ತು (ಪು. 91ರಲ್ಲಿ) "ವಲಸೆ ಬರಲು ಪ್ರೋತ್ಸಾಹಿಸಿದನು. ವಲಸೆ ಬಂದವರನ್ನು ನೆಲೆಗೊಳಿಸಿದನು" ಎಂದು ವಲಸೆಗಳನ್ನು ಕಲ್ಪಿಸಿ, ಬರೆದು, ಅಹಿಚ್ಛತ್ರದವರು ಆಮಂತ್ರಿತರಾಗಿ ಬಂದವರಲ್ಲ, ತಾವಾಗಿ ಬಂದು ಸೇರಿದವರು. ಆಮಂತ್ರಿಸಿ ದಾನಮಾಡುವಷ್ಟು ಗೌರವಸ್ಥರಲ್ಲ. ನಿರ್ವಾಸಿತರಾಗಿ ಭಿಕಾರಿಗಳಂತೆ ಬಂದವರು. ಆಮಂತ್ರಿತರಾಗಿ ಬಂದರೆ ಮೊದಲಿನ ಸ್ಥಾನಿಕರಲ್ಲಿ ಕೊರತೆ ಎದ್ದು ಕಾಣುವುದಿಲ್ಲವೇ? ಅವರು ಉಂಬಳಿ ಪಡೆದ ಗೌರವಸ್ಥರು! ಇದಕ್ಕೆ ಯಾವ ರೀತಿಯಿಂದಲೂ ತೊಂದರೆಯಾಗಬಾರದು. ಇದು ಭಟ್ಟರ ವಿವಕ್ಷೆ.

3. (ಪು. 141ರಲ್ಲಿ) ೧. ಸ್ಥಾನಿಕರು, ೨. ಹವೀಕರು, ೩. ಅಹಿಚ್ಛತ್ರದ ಬ್ರಾಹ್ಮಣರು, (ಶಿವಳ್ಳಿ ಮತ್ತು ಕೋಟ) ಹೀಗೆ ಬರೆದು ೧ನೇ ಸ್ಥಾನಿಕರು ಮೊದಲಿಂದಲೂ ಇದ್ದ ಸ್ಥಳಮಂದಿಕರು ಆಶ್ವಲಾಯನ ಸೂತ್ರಾನುಸಾರಿ ಋಗ್ವೇದಿಗಳು. ಪರಶುರಾಮ ನಿರ್ಮಿತರು ಇತ್ಯಾದಿ. ೨ನೇ ವಲಸೆಯವರು ಹವೀಕರು, ಇವರು ಉತ್ತರ ಪಾಂಚಾಲದಿಂದ ವಲಸೆ ಬಂದವರು ಪು. 90, 91 ಬೋಧಾಯನ ಸೂತ್ರಾನುಸಾರಿ ಯಜುರ್ವೇದಿಗಳು, ಪು. 94 ೩ನೇ ವಲಸೆಯ ಕೋಟ ಶಿವಳ್ಳಿಯವರು ಕುಪ್ಪೆತ್ತೂರಿನಿಂದ ಬಂದವರು ನಿರ್ವಾಸಿತರು. ಗಂಡಸರು ಮಾತ್ರ ಬಂದಿರುತ್ತಾರೆ. ಇವರು ತಮ್ಮ

ಪ್ರಾಧಿನೆಗೆ ಸುಳ್ಳು ಕಂತೆಗಳನ್ನು 14ನೇ ಶತಕ ನಂತರ ಬರಕೊಂಡು ತುಳು ಗ್ರಾಮ ಪದ್ಧತಿಯೆಂದು ಹೇಳಿಕೊಳ್ಳುತ್ತಿದ್ದಾರೆ. ಹೀಗೆ ಭಟ್ಟರ ಇತಿಹಾಸ ಹೇಳುತ್ತದೆ. ಸಹ್ಯಾದ್ರಿಯಲ್ಲಿ ಮತ್ತು ಪು. 69ರಲ್ಲಿ ಒಂದೇ ಕಾಲಕ್ಕೆ ಗೋಕರ್ಣದಿಂದ ಪಯಸ್ವಿನೀ ತನಕ ಹವೀಕ, ಕೋಟ, ಶೀವಳ್ಳಿಯವರನ್ನು ಏಕಕಾಲದಲ್ಲಿ ನೆಲೆ ನಿಲ್ಲಿಸಿದ ವಿವರವನ್ನು ಬರೆದಿರಲಿಕ್ಕೆ ಈಗ ಅದರ ವಿರುದ್ಧ 2ನೇ ವಲಸೆ ಹವೀಕರು, 3ನೇ ವಲಸೆ ಕೋಟ, ಶೀವಳ್ಳಿಯವರು ಎಂಬ ಈ ಭೇದ ಏಕೆ? ಎಂಬ ಪ್ರಶ್ನೆ ಸಹಜ ಉತ್ಪನ್ನವಾಗುತ್ತದೆ. ಆದರೆ ಇದರಲ್ಲಿ ಒಂದು ಅಭಿಪ್ರಾಯ ಭಟ್ಟರ ಮನಸ್ಸಿನಲ್ಲಿ ಗೂಢವಾಗಿದೆ. ಅದು ಏನಂದರೆ "ಸ್ಥಾನಿಕ ಮತ್ತು ಪಾಟಾಳಿ ಒಂದಲ್ಲ. ಭಟ್ಟರು ಹಾಗೆ ಸಿದ್ಧಾಂತ ಮಾಡಿಕೊಂಡಿದ್ದಾರೆ. ಹವೀಕರಿದ್ದ ಉತ್ತರ ಕನ್ನಡದಲ್ಲಿ ಸ್ಥಾನಿಕರಿಲ್ಲ. ಪಾಟಾಳಿಗಳು ಮಾತ್ರ ಇರುವುದು. ಈ ವಲಸೆ ಬಂದ ಹವೀಕರಿಂದ ಪಾಟಾಳಿಗಳ ಉನ್ನತಿಗೆ ಕೊರತೆ ಉಂಟಾದರೂ, ಪಾಟಾಳಿಗಳು ದೇವಸ್ಥಾನದ ಪರಿಚಾರಕರು ಇರುವುದರಿಂದ ಅಡ್ಡಿ ಇಲ್ಲ. ಸ್ಥಾನಿಕರ ಗೌರವಕ್ಕೆ ಹಾನಿ ತಟ್ಟುವುದಿಲ್ಲ. ಸ್ಥಾನಿಕರೆಂದರೆ ದೇವಸ್ಥಾನಗಳಲ್ಲಿ ಅಧಿಕಾರಸ್ಥರು. ಹಾಗೆ ಭಟ್ಟರು ಚಾರಿತ್ರಿಕವಾಗಿ ತೀರ್ಮಾನಿಸಿದ್ದಾರೆ. ಅವರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇರತಕ್ಕವರು. ಕೋಟ ಮತ್ತು ಶೀವಳ್ಳಿಯವರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿಯೇ ಬಂದು ನಿಂತು ಸ್ಥಾನಿಕರ ಅಧಿಕಾರಕ್ಕೇನೇ ಹಾನಿಮಾಡಿದುದರಿಂದ ಭಟ್ಟರು ಕೋಟ, ಶೀವಳ್ಳಿಯವರಿಗೆ ತಕ್ಕ ಶಿಕ್ಷೆ ವಿಧಿಸುವವರಿದ್ದಾರೆ. ಆ ಶಿಕ್ಷೆಯು ಹವೀಕರಿಗೆ ಬೇಡವೆಂದು ಪ್ರತ್ಯೇಕವಾಗಿ ಹವೀಕರನ್ನು 2ನೇ ವಲಸೆಯೆಂದು ಉತ್ತರ ಪಾಂಚಾಲದಿಂದ ತರಿಸಿದ್ದಾರೆ. 3ನೇ ವಲಸೆಯೆಂಬ ಕೋಟ ಶೀವಳ್ಳಿಯವರೆಂದರೆ ಅಹಿಚ್ಛತ್ರದವರೂ ಅಲ್ಲ. ಪಾಂಚಾಲದವರೂ ಅಲ್ಲ. ಕೊನೆಗೆ ನೋಡಿದರೆ ಬ್ರಾಹ್ಮಣರೂ ಅಲ್ಲ. ಅಹಿಚ್ಛತ್ರದ 12 ಸಾವಿರ ಅಗ್ನಿಹೋತ್ರಿಗಳಿಂದ ಶುದ್ಧೀಕರಣ ಹೊಂದಿದ 32 ಕುಟುಂಬಗಳು ಎಂದು ಹೇಳುವಷ್ಟು ಭಟ್ಟರು ಸಿಟ್ಟಿಗೆದ್ದಿದಾರೆ. ತಾವು ಅಹಿಚ್ಛತ್ರದಿಂದ ಬರಹೆ ಕುಪ್ಪೆತ್ತೂರಿನಿಂದ ಬಂದಿದ್ದರೂ ಅಹಿಚ್ಛತ್ರದವರೆಂದು ಹೇಳಿಕೊಳ್ಳುತ್ತಿರುವರು ಎಂದು ಮುಂತಾದ್ದಾಗಿ ಕೋಟ ಶೀವಳ್ಳಿಯವರನ್ನು ಬೈಯುವವರಿದ್ದಾರೆ. ಅಷ್ಟರಲ್ಲಿಯೂ ತೃಪ್ತಿಇಲ್ಲದಾಗಿ ಅವರ ಮೇಲೆ ಚೋಳರ ಕಡೆಯಿಂದ ದಾಳಿ ಮಾಡಿಸಿದ್ದಾರೆ. ಕದಂಬ ರಾಜರೊಳಗೇನೇ ಅಂತಃಕಲಹ ಹುಟ್ಟಿಸಿ, ಒಂದು ಪಕ್ಷದವರ ಸೈನ್ಯವನ್ನು ಅಗ್ರಹಾರದೊಳಗೆ ಹೊಗಿಸಿ, ಕುಪ್ಪೆತ್ತೂರಿನಿಂದ ಹೊರ ಹಾಕಿಸಿದ್ದಾರೆ. ಅವರ ಹೆಂಡರು, ಮಕ್ಕಳು, ಮನೆವಾರ್ತೆಗಳು ಎಲ್ಲಾ ರಜಕಾರ ಹಾವಳಿಯಿಂದ ಹೈದರಾಬಾದಿನಲ್ಲಿ ಆದಂತೆ ಸೈನಿಕರ ಕಡೆಯಿಂದ ಅಪಹಾರವಾಗಿರಬಹುದೇನೋ? ತಿಳಿಯದು. ಗಂಡಸರನ್ನು ಮಾತ್ರ ನಿರ್ವಾಸಿತರನ್ನಾಗಿ ಮಾಡಿ ತುಳುವಕ್ಕೆ ಅಟ್ಟಿದರು ಎಂಬ ಅಭಿಪ್ರಾಯದ ಮಾತುಗಳನ್ನು ಪು. 94ರಲ್ಲಿ ಕಾಣಬಹುದು. ಆದರೂ ಈ ಕೋಟ ಶೀವಳ್ಳಿಯವರು ತಮ್ಮನ್ನು ಅಹಿಚ್ಛತ್ರದಿಂದ ಕರೆತರಿಸಿ ನೆಲೆ ನಿಲ್ಲಿಸಿದರು ಎಂಬ ದೊಡ್ಡಸ್ಥಿಕೆಯ ಮಾತನ್ನು ಬಿಟ್ಟಿಲ್ಲ. ಹೊಂದಿಕೆಯಾಗಿ ಅಸಂಗತಿಗಳನ್ನೆಲ್ಲಾ ಬರೆದುಕೊಂಡು "ತುಳು ಗ್ರಾಮಪದ್ಧತಿ"ಯೆಂದೂ